# ಶ್ರುತಿತತ್ತ್ವಪ್ರದೀಪಿಕಾ

(ಫಿಟ್‌ಸೂತ್ರಾರ್ಥವ್ಯಾಖ್ಯಾನಮ್)



ವ್ಯಾಖ್ಯಾನಕಾರರು: ಡಾ। ಕದ್ರಿ ಪ್ರಭಾಕರ ಅಡಿಗ

ಪ್ರಕಾಶನ:
ಶ್ರೀಮಹಾಲಿಂಗೇಶ್ವರ ಪ್ರಕಾಶನ, ಸಾಣೂರು

# ಶ್ರುತಿತತ್ತ್ವಪ್ರದೀಪಿಕಾ

(ಫಿಟ್‌ಸೂತ್ರಾರ್ಥವ್ಯಾಖ್ಯಾನಮ್)

ವ್ಯಾಖ್ಯಾನಕಾರರು

ಡಾ। ಕದ್ರಿ ಪ್ರಭಾಕರ ಅಡಿಗ

ಪ್ರಕಾಶನ

ಶ್ರೀಮಹಾಲಿಂಗೇಶ್ವರ ಪ್ರಕಾಶನ

ಸಾಣೂರು

# Shrutitattvapradeepika

Sanskrit Grammar with Commentary in Kannada Language

Commentator **Dr. Kadri Prabhakara Adiga**
"Madhwesha Nilaya"
Manjunatha Colony,
Bejai Post, Kadri
Mangalore-575 004
Mobile : 9845761390

Published by : **Shri Mahalingeshwara Prakashana**
**(S. A. Gururaja Acharya)**
Sanoor, Berke.



Year of Publication : 2019

Pages : xx+ 102

**Rs. 200-00**

DTP by : `Sri Navadurga Lasertech',
C/oDr. K. Padmanabha Kekunnaya, Udupi. (Mob. 9342438727)

Printed at : Bharath Press, Kalsanka, Udupi



ಶ್ರೀಮಹಾಲಿಂಗೇಶ್ವರ ದೇವರು
ದೇಂದಬೆಟ್ಟು, ಸಾಣೂರು



ಶ್ರೀಮಹಾಲಿಂಗೇಶ್ವರ ದೇವಸ್ಥಾನ, ದೇಂದಬೆಟ್ಟು, ಸಾಣೂರು

ತಮ್ಮ ಪಂಚಮಪರ್ಯಾಯದಲ್ಲಿ ಶಿಷ್ಯರಿಂದ ಕೂಡಿ
ಶ್ರೀಕೃಷ್ಣಪೂಜಾಕೈಂಕರ್ಯವನ್ನು ಪೂರಯಿಸಿದ ಗುರು

## ಪೇಜಾವರಮಠಾಧೀಶ

## ಶ್ರೀಶ್ರೀವಿಶ್ವೇಶತೀರ್ಥಶ್ರೀಪಾದರು



ವಿಶ್ವೇಶಂ ವಿಶ್ವವಂದ್ಯಂ ತಂ ಸಶಿಷ್ಯಗುರುಪೂಜಿತಮ್ ।
ಪ್ರಾಣೇಶಂ ಜ್ಞಾನದಂ ಕೃಷ್ಣಂ ವಂದೇ ಮಧ್ವಕರಾರ್ಚಿತಮ್ ॥



ವಿದ್ಯಾಧೀಶಮುನೀಶಂ ತಂ ಗುರುಮಧ್ವಪ್ರತಿಷ್ಠಿತಮ್ ॥
ರಾಮಕೃಷ್ಣಾದಿನಾಮಾನಂ ಪ್ರಾಣನಾಥಂ ಹರಿಂ ಭಜೇ ॥

## ಶ್ರೀಶ್ರೀ ವಿದ್ಯಾಪ್ರಸನ್ನತೀರ್ಥಸ್ವಾಮೀಜಿ

ಜಗದ್ಗುರು ಶ್ರೀ ಮಧ್ವಾಚಾರ್ಯ ಮಹಾಸಂಸ್ಥಾನಮ್
ಶ್ರೀಸಂಪುಟ ನರಸಿಂಹಸ್ವಾಮಿ, ಶ್ರೀ ಸುಬ್ರಹ್ಮಣ್ಯ ಮಠ,
ಸುಬ್ರಹ್ಮಣ್ಯ – 574 238. ಸುಳ್ಯ ತಾಲೂಕು, ದ.ಕ.
ದೂರವಾಣಿ : 08257-281221, 281211



## ಇವರ ಶುಭಾನುಗ್ರಹಪೂರ್ವಕ

# ಇವರ ಸಂಸ್ಮರಣಾರ್ಥ



ಬೆರ್ಕೆ ಮಾಧವಾಚಾರ್ಯರು



ಎಸ್. ಆರ್. ಅನಂತಾಚಾರ್ಯರು



**ಕಮಲಾದೇವಿಪ್ರಸಾದ ಆಸ್ರಣ್ಣ**
ಆನುವಂಶಿಕ ಪ್ರಧಾನ ಅರ್ಚಕರು
ಶ್ರೀದುರ್ಗಾಪರಮೇಶ್ವರೀ ದೇವಸ್ಥಾನ, ಕಟೀಲು

# ಶುಭಾಶಂಸನೆ

'ಅನಂತಾ ವೈ ವೇದಾಃ' ಎಂಬ ಮಾತಿನಂತೆ, ವೇದಗಳು ಅಂತ್ಯವಿಲ್ಲದವುಗಳು ಹಾಗೂ ಅಸಂಖ್ಯಗಳು. ಈ ಎರಡೂ ಅರ್ಥಗಳನ್ನು 'ಅನಂತ' ಎಂಬ ಶಬ್ದ ಕೊಡುತ್ತದೆ. ಈ ಅನಂತವನ್ನು ಕಾಣುವ ಪ್ರಯತ್ನ ಮಾಡಿದವರು ಪ್ರಾಚೀನ ಋಷಿಗಳು. ಅವರ ದೃಷ್ಟಿಗೋಚರವಾದ ಅನೇಕಗಳು ಇಂದು ಬ್ರಾಹ್ಮವಾಣಿಯಲ್ಲಿ ಉಚ್ಚರಿಸಲ್ಪಡುತ್ತವೆ. ಉದಾತ್ತ ಅನುದಾತ್ತ ಸ್ವರಿತ ಸ್ವರಭೇದಗಳಿಂದ ಅಕ್ಷರಭೇದವನ್ನು ಸಾಧಿಸಿ ವೇದದ ಅರ್ಥಗಳೂ ಅನಂತ ಎಂಬುದೂ ಸಾಧಿಸಲ್ಪಟ್ಟಿವೆ. ಈ ಅನಂತತೆಯು ಅನಂತನನ್ನು ಕಾಣುವ ಸಂಕಲ್ಪ ಎಂಬುದು ಸತ್ಯ.

ಈ ವೇದವಾಙ್ಮಯದ ಅರ್ಥಾನುಸಂಧಾನಕ್ಕೆ ಹೊರಟ ಅರ್ವಾಚೀನ ಋಷಿಗಳಲ್ಲಿ ಕದ್ರಿ ಪ್ರಭಾಕರ ಅಡಿಗರು ಒಬ್ಬರು. ವೈದಿಕ ವ್ಯಾಕರಣದ ಬಗ್ಗೆ ಅನೇಕ ಕೃತಿಗಳನ್ನು ಬರೆದು ಮುದ್ರಿಸಿ ಜನಮಾನಸದಲ್ಲಿ ಸ್ಥಾಯಿಯಾಗಿ ತನ್ನ ಪ್ರಭೆಯನ್ನು ಬೀರಿದ್ದಾರೆ. ಅಡಿಗ ಎಂಬ ಶಬ್ದವೂ ಬಹ್ವರ್ಥ ಉಳ್ಳದ್ದು. ಅಡಿ ಎಂದರೆ ಪಾದ. ಪಾದ ಎಂದರೆ ಸ್ವರೂಪ. ವೇದಸ್ವರೂಪ ಅಥವಾ ಭಗವತ್ ಸ್ವರೂಪವನ್ನು ಗಚ್ಛತಿ (ತಿಳಿದವನು). ಈ ತಿಳಿದವರ ಮನೋಭೂಮಿಕೆಯಲ್ಲಿ ಮತ್ತೊಂದು ವೈದಿಕಸೂತ್ರಪರಂಪರೆಯ ಬೀಜಾವಾಪವಾಗಿ ಮೊಳಕೆಯೊಡೆದು ಬೃಹದ್ ವೃಕ್ಷವಾಗಿ ಕಾಣಿಸಿಕೊಂಡು, ಕೃತಿರೂಪದಲ್ಲಿ ಬರುತ್ತಿದೆ ಎಂದರೆ ಅತ್ಯಂತ ಸಂತೋಷ. ಈಶ್ವರನ ಆರಾಧಕರು. 'ಈಶಾನಃ ಸರ್ವವಿದ್ಯಾನಾಂ...' ಎಂಬ ಹಾಗೆ ವಿದ್ಯೆಗಳ ಒಡೆಯನ ಅನುಗ್ರಹ ಸಂಪೂರ್ಣ ಇದೆ ಎಂದು ನಿಶ್ಚಯವಾಗಿ ಹೇಳಬಹುದು. ನಮ್ಮ ವಿದ್ಯಾಸ್ವರೂಪಿಣೀ ಕಟೀಲು ತಾಯಿ ಇವರಿಗೆ ಇದೇ ರೀತಿ ಅನುಗ್ರಹಿಸಲಿ. ಅನೇಕ ಕೃತಿಗಳ ಪ್ರಸೂ ಇವರಾಗಲಿ ಎಂದು ನಾನು ಹಾರೈಸುತ್ತೇನೆ.

**ಕಮಲಾದೇವಿಪ್ರಸಾದ ಆಸ್ರಣ್ಣ**



**ಶ್ರೀಹರಿನಾರಾಯಣ ಆಸ್ರಣ್ಣ**
**ಕಟೀಲು**

# ಶುಭಾಶಂಸನೆ

ಪ್ರಸಿದ್ಧ ವೇದವಿದ್ವಾಂಸರಾದ ಕದ್ರಿ ಶ್ರೀ ಪ್ರಭಾಕರ ಅಡಿಗ ಅವರು ರಚಿಸಿದ 'ಶ್ರುತಿತತ್ತ್ವದೀಪಿಕಾ' ಎಂಬ ಈ ವೇದದ ಶಬ್ದಸ್ವರಗಳಿಗೆ ಸಂಬಂಧಿಸಿದ ಗ್ರಂಥವು ವೇದಾಧ್ಯಯನವನ್ನು ಸಾಂಗ**ವಾಗಿ** ಮಾಡುವವರಿಗೆ ಅತ್ಯಂತ ಉಪಯುಕ್ತವಾಗಿದೆ. ಇದರಲ್ಲಿ ವೇದದ ಅಕ್ಷರಗಳು, ಅಕ್ಷರಸಂಧಿಗಳು ಹಾಗೂ ಸಂಧಿಯಲ್ಲಿ ಆಗುವ ಸ್ವರವ್ಯತ್ಯಾಸ ಮೊದಲಾದ ಅಪೂರ್ವ ವಿಚಾರಗಳು ಹಾಗೂ ಪ್ರಕೃತಿ ವಿಕೃತಿ ಪಾಠವಿಚಾರಗಳು ಲಕ್ಷಣೋದಾಹರಣಸಹಿತವಾಗಿ ನೀಡಲ್ಪಟ್ಟಿದ್ದು ವೇದಾಧ್ಯಯನ ಮಾಡುವವರಿಗೆ ತುಂಬ ಉಪಯುಕ್ತವಾಗಿದೆ. ಜಗನ್ಮಾತೆ ಶ್ರೀದೇವಿಯು ಲೇಖಕರಿಗೆ ಆಯುರಾರೋಗ್ಯವನ್ನು ನೀಡಿ ಇನ್ನೂ ಹೆಚ್ಚಿನ ವೇದಮಾತೆಯ ಸೇವೆಯನ್ನು ಮಾಡಿಸಲೆಂದು ಪ್ರಾರ್ಥಿಸುತ್ತೇನೆ.

**– ವಿದ್ವಾನ್ ಶ್ರೀಹರಿನಾರಾಯಣ ಆಸ್ರಣ್ಣ**

ಕಟೀಲು



# ಶುಭಾಶಂಸನೆ

ಗುರುಗಳಾದ ವಿದ್ವಾನ್ ಶ್ರೀಯುತ ಕದ್ರಿ ಪ್ರಭಾಕರ ಅಡಿಗರು ಉಡುಪಿಯಲ್ಲಿ ಅನೇಕ ವಿದ್ಯಾರ್ಥಿಗಳಿಗೆ ವೇದಪಾಠವನ್ನು, ಶಾಸ್ತ್ರಪಾಠವನ್ನು, ಸಂಸ್ಕೃತಪಾಠವನ್ನು ಮಾಡಿ ಅನೇಕ ವಿದ್ವಾಂಸರನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡಿರುತ್ತಾರೆ. ಲೌಕಿಕ ಜೀವನದಲ್ಲಿರುವ ಸಾಮಾನ್ಯರಿಗೂ ಕೂಡ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೇ ದೇವರ ಬಗ್ಗೆ ವೇದಗಳ ಬಗ್ಗೆ ಸುಲಭವಾಗಿ ತಿಳಿಯುವಂತೆ ಪಾಠವನ್ನು ಮಾಡಿದ್ದಾರೆ. ವೇದಶಾಸ್ತ್ರ ಸಂಸ್ಕೃತದ ಉಳಿವಿಗಾಗಿ ಅನೇಕ ಗ್ರಂಥಗಳನ್ನು ರಚಿಸಿರುವ ಗುರುಗಳ ಈ ನೂತನ ಗ್ರಂಥವೂ ವೈದಿಕರೆಲ್ಲರಿಗೂ ಉಪಯುಕ್ತವಾಗಲೆಂದು ಶ್ರೀಹರಿವಾಯುಗುರುಗಳಲ್ಲಿ ಪ್ರಾರ್ಥಿಸುವ,

ತಮ್ಮ ಶಿಷ್ಯ

**ವೇ। ಮೂ। ಶ್ರೀ ಮುರಲೀಧರ ತಂತ್ರೀ**

**ಪ್ರದೀಪಕುಮಾರ ಕಲ್ಕೂರ**
ಕನ್ನಡ ಸಾಹಿತ್ಯದ ಜಿಲ್ಲಾಧ್ಯಕ್ಷರು, ಮಂಗಳೂರು



## ಶುಭಾಶಂಸನೆ

ಚತುರ್ವೇದಗಳಲ್ಲಿ ಹಾಗೂ ಸಂಸ್ಕೃತಭಾಷೆಯಲ್ಲಿ ಹಾಗೂ ಪೌರೋಹಿತ್ಯ ಕ್ಷೇತ್ರದಲ್ಲಿ ಸಾಧನೆ ಮಾಡಿದ ತುಳುನಾಡಿನ ಪ್ರಸಿದ್ಧವೇದವಿದ್ವಾಂಸರಾದ ಡಾ. ಕದ್ರಿ ಪ್ರಭಾಕರ ಅಡಿಗರು ವೈದಿಕಸಾಹಿತ್ಯದಲ್ಲಿ ಅಪರೂಪವಾದ ಕೃತಿರತ್ನವೊಂದನ್ನು ರಚಿಸಿ ಜಿಜ್ಞಾಸುಗಳಿಗೆ ಸಮರ್ಪಿಸುತ್ತಿದ್ದಾರೆ ಎಂದು ಕೇಳಿ ತುಂಬಾ ಆನಂದವಾಯಿತು. ಈ ಕೃತಿಯು ಅಧಿಕಾರಿಗಳ ಹೃನ್ಮನಸ್ಸುಗಳಿಗೆ ತಲುಪಲಿ ಅಡಿಗರ ಮೂಲಕ ಇನ್ನಷ್ಟು ವೇದಮಾತೆಯ ಸೇವೆಯಾಗಲೆಂದು ವೇದನಾರಾಯಣ ನನ್ನೂ ಶ್ರೀಮಂಜುನಾಥೇಶ್ವರ ಸ್ವಾಮಿಯನ್ನೂ ಭಕ್ತ್ಯಾದರಗಳಿಂದ ಪ್ರಾರ್ಥಿಸುತ್ತೇವೆ.

– ಪ್ರದೀಪ ಕುಮಾರ ಕಲ್ಕೂರ

# ಶ್ರೀಕೃಷ್ಣ-ಮುಖ್ಯಪ್ರಾಣ ಸಂಸ್ಕೃತ ವೇದಪಾಠಶಾಲೆ

## ಬೆರ್ಕೆ, ಸಾಣೂರು

ತುಳುನಾಡಿನ ಕಾರ್ಕಳದಲ್ಲೊಂದು ಹಳ್ಳಿ ಸಾಣೂರು. ಊರಿನ ಪರ್ಪಲೆ ಬೆಟ್ಟದ ತಪ್ಪಲಿನ ಹರಿದ್ವರ್ಣದ ಪ್ರಶಾಂತ ಪರಿಸರದಲ್ಲಿ ಅಲ್ಲಲ್ಲಿ ಹಲವು ಕುಟುಂಬಗಳು ನೆಲೆನಿಂತಿವೆ. ಇವುಗಳಲ್ಲಿ ಬೆರ್ಕೆ ಮನೆಯೂ ಒಂದು. ಬೆರ್ಕೆ ಮನೆಯ ಈ ಸಂಪ್ರದಾಯಸ್ಥ ಆಚಾರ್ಯ ಮನೆತನ ಡಾ. ಪ್ರಭಾಕರ ಅಡಿಗರ ತಾಯಿಯ ತವರು. ಈ ಮನೆತನದ ಹಿರಿಯ ತಲೆಮಾರೊಂದು ದಕ್ಷಿಣದ ಕೇರಳದಿಂದ ವಲಸೆ ಬಂದು ಸಾಣೂರಲ್ಲಿ ನೆಲೆಸಿತ್ತು. ಪೇಟೆಯ ಪರಿಸರದಲ್ಲಿ ಬೆಳೆದ ಅಡಿಗರು ಮತ್ತು ಅವರ ಒಡಹುಟ್ಟಿದವರಿಗೆ ಹಚ್ಚ ಹಸುರನ್ನು ಹೊದ್ದು ನಿಂತಿರುವ ಬೆರ್ಕೆಯೆಂದರದೊಂದು ಸೋಜಿಗ. ಅಜ-ಅಜಿ, ಸೋದರಮಾವ, ಅತ್ತೆ, ಮಕ್ಕಳಿಂದ ತುಂಬಿದ ಸಾಣೂರು ಮನೆಗೆ ತಾಯಿಯ ಸೆರಗು ಹಿಡಿದು ಮಂಗಳೂರಿನಿಂದ ಬರುವುದೆಂದರೆ ಅದೇನೋ ಉತ್ಸಾಹ. ಸಮವಯಸ್ಕ ಮಾವನ ಮಕ್ಕಳೊಡನೆ ಪಂಜರದಿಂದ ಬಿಟ್ಟ ಹಕ್ಕಿಗಳಂತಾಗುತ್ತಿದ್ದರು.

ಬಾಲ್ಯದ ಈ ಆಕರ್ಷಣೆ ಬೆಳೆಯುತ್ತಾ ಶಿಕ್ಷಣ, ಬದುಕು ಕಟ್ಟುವ ಕಾಯಕದಲ್ಲಿ ವ್ಯಸ್ತರಾದಾಗ ತುಸು ಹಿನ್ನೆಲೆಗೆ ಸರಿಯಿತು. ಯುವ ಅಡಿಗರು ವೈದಿಕ ಶಿಕ್ಷಣ, ಚತುರ್ವೇದಾಭ್ಯಾಸ, ವಿದ್ಯಾವಾರಿಧಿ ಪದವಿಗಾಗಿ ಅಧ್ಯಯನ ಇತ್ಯಾದಿ ಚಟುವಟಿಕೆಗಳಲ್ಲಿ ಮಗ್ನರಾದರು. ಇದಲ್ಲದೇ ಇನ್ನೂ ಅನೇಕ ಪಂಡಿತರಲ್ಲಿ ಅಧ್ಯಯನನಡೆಸಿ, ವೈದಿಕ ವಾಙ್ಮಯಕ್ಷೇತ್ರದಲ್ಲಿ ತನ್ನದೇ ಛಾಪು ಮೂಡಿಸಿದರು. ವಂಶಪಾರಂಪರ್ಯವಾಗಿ ಬಂದ ಕದ್ರಿಯ ಶ್ರೀಮಂಜುನಾಥದೇವರ ಪೂಜೆಯ ಜೊತೆಜೊತೆಗೆ ಪೌರೋಹಿತ್ಯ, ವೇದಪ್ರಸಾರ ಮತ್ತು ತನ್ನ ಸಂಚಿತಜ್ಞಾನವನ್ನು ಕ್ರೋಡೀಕರಿಸಿ ಪುಸ್ತಕರೂಪಕ್ಕಿಳಿಸುವ ಕೆಲಸಗಳಲ್ಲಿ ವ್ಯಸ್ತರಾಗಿದ್ದಾರೆ. ಅದಾಗಲೇ ಅಡಿಗರು ಹಲವಾರು ಕಡೆ ವಯಸ್ಸಿನ ಭೇದವಿಲ್ಲದೇ ಆಸಕ್ತರೆಲ್ಲರಿಗೂ ವೇದದ ಸೊಗಡನ್ನು ಉಣಬಡಿಸುವ ಕಾಯಕದಲ್ಲಿ ನಿರತರಾಗಿದ್ದಾರೆ. ಮಠ-ಮಂದಿರ, ಮನೆಗಳಲ್ಲಿ ವೇದ ತರಗತಿಗಳನ್ನು ನಡೆಸುತ್ತಿದ್ದಾರೆ.

ಈ ಮಧ್ಯೆ ಬದುಕು ಒಂದು ಹಂತ ತಲುಪಿದಾಗ ಬಾಲ್ಯದ ಸೆಳೆತ ಮತ್ತೆ ಗರಿಗೆದರತೊಡಗಿತು. ತಮ್ಮ ಹಿರಿಯರ ಬೆರ್ಕೆ ಮನೆಯಲ್ಲಿ ತುಳುಲಿಪಿ ಸೇರಿದಂತೆ ಹಳೆಯ ತಾಡಪತ್ರಗಳ ಸಂಗ್ರಹ, ಈ ಮನೆತನದ ವೇದಾಧ್ಯಯನದ ಪರಂಪರೆಗೆ ಇಂಬು ಕೊಟ್ಟಿತ್ತು. ಈ ಸತ್ಪರಂಪರೆಯನ್ನು ಮುಂದುವರಿಸಬೇಕೆಂಬ ಬಯಕೆಯೊಂದು ಮೊಳಕೆಯೊಡೆದಿತ್ತು. ಸಾಣೂರಿನ ಅವರ ಸೋದರಭಾವಂದಿರೂ ಅಡಿಗರ ಈ

ಪ್ರಸ್ತಾವವನ್ನು ತುಂಬು ಹೃದಯದಿಂದ ಸ್ವಾಗತಿಸಿದರು. ತತ್ಪರಿಣಾಮವಾಗಿ ಬೆರ್ಕೆ ಮನೆಯ ಚಾವಡಿಯಲ್ಲಿ ಶ್ರೀಕೃಷ್ಣಮುಖ್ಯಪ್ರಾಣ ಸಂಸ್ಕೃತ ವೇದಪಾಠಶಾಲೆ ೨೦೧೭ನೆಯ ಇಸವಿಯಲ್ಲಿ ಪ್ರಾರಂಭವಾಯಿತು.

ವೈದಿಕ ವ್ಯಾಕರಣದನ್ವಯ ಅಸ್ಖಲಿತ, ಶ್ರುತಿಬದ್ಧ ಮಂತ್ರೋಚ್ಚಾರಣೆಗೆ ಅಡಿಗರು ಹೆಸರುವಾಸಿಯಾಗಿದ್ದಾರೆ. ಅಪೇಕ್ಷಣೀಯ ಅರ್ಥ-ಫಲಗಳಿಗಾಗಿ ಅಕ್ಷರ, ಸ್ವರ, ಉಚ್ಚಾರಣೆಗಳು ಯುಕ್ತವಾಗಿರಬೇಕು, ಜೊತೆಯಲ್ಲಿ ಪಠನ ಶ್ರುತಿ-ಲಯಬದ್ಧವಾಗಿರಬೇಕು ಎಂಬ ಅಂಶಗಳನ್ನು ಬಲವಾಗಿ ಪ್ರತಿಪಾದಿಸುವವರಾಗಿರುವುದರಿಂದ, ಅವರ ತರಗತಿಗಳು ಸ್ವರ, ಉಚ್ಚಾರಣೆಗಳ ಪ್ರಾಥಮಿಕ ಅಭ್ಯಾಸಗಳೊಂದಿಗೆ ಆರಂಭಗೊಂಡವು. ಈ ಅಂಶಗಳ ಭದ್ರ ಬುನಾದಿಯ ಮೇಲೆ ಅಡಿಗರ ಮುಂದಿನ ಪಾಠಗಳು ಗಟ್ಟಿಯಾಗುತಾ ಸಾಗುತ್ತವೆ. ಈ ತರಹದ ಸೂಕ್ಷ್ಮ, ಪ್ರಾಥಮಿಕ ಅಂಶಗಳು ಸ್ವಾಧ್ಯಯನಕ್ಕೆ ಸಹಕಾರಿ.

ವಾರಕ್ಕೊಂದು ದಿನ ಒಂದು-ಒಂದೂವರೆ ಘಂಟೆ ಅವಧಿಯ ತರಗತಿಗಳಲ್ಲಿ ಅಡಿಗರು ಪ್ರಮುಖ ವೇದಮಂತ್ರಗಳಾದ ಪವಮಾನಸೂಕ್ತ, ರುದ್ರಸೂಕ್ತಗಳನ್ನೊಳಗೊಂಡಂತೆ ಹಲವಾರು ಸೂಕ್ತಗಳನ್ನು ಮತ್ತು ಅವುಗಳ ಘನಪಾಠಗಳನ್ನು ಕಲಿಸಿದ್ದಾರೆ. ವಿದ್ಯಾರ್ಥಿಗಳ ಆಸಕ್ತಿ-ಶ್ರದ್ಧೆಗಳೆದುರು, ವಿದ್ಯಾರ್ಥಿಗಳ ಸಂಖ್ಯೆ ಅಡಿಗರಿಗೆ ಗೌಣ. ದಾನವನ್ನು ಸತ್ಪಾತ್ರರಿಗೆ ನೀಡಿದಾಗ ಅದಕ್ಕೊಂದು ಘನತೆ.

ದಾನಂಗಳದ ಪ್ರಭಾಕರನಂತೆ, ಪ್ರಭಾಕರ ಅಡಿಗರು ವೇದವಾಙ್ಮಯದ ತೇಜಃಪುಂಜ. ಅನ್ವರ್ಥನಾಮದಂತೆ ಸಾರ್ಥಕ ಬದುಕು.

ಏಕಮೇವಾಕ್ಷರಂ ಯಸ್ತು ಗುರುಃ ಶಿಷ್ಯಂ ಪ್ರಬೋಧಯೇತ್ ।
ಪೃಥಿವ್ಯಾಂ ನಾಸ್ತಿ ತದ್ದ್ರವ್ಯಂ ಯದ್ದತ್ತ್ವಾ ಚಾನೃಣೀ ಭವೇತ್ ॥

– ಇಂದಿರಾ ಆರ್. ಆಚಾರ್ಯ

# ಮುನ್ನುಡಿ

**'ಯಥೋಕ್ತಂ ಲೋಕವೇದಯೋಃ', 'ವಾಚ ಉಚ್ಚಾರಣೇ ವಿಧಿಮ್'** ಈ ಎರಡು ಮಾತುಗಳು ಪಾಣಿನೀಯ ಶಿಕ್ಷಾದ ಮೊದಲೆರಡು ಶ್ಲೋಕಗಳಲ್ಲಿ ಬರುವಂತಹದ್ದು.

ಶಿಕ್ಷಾಕರ್ತೃವಿನ ಅಭಿಪ್ರಾಯವೇನೆಂದರೆ ಲೋಕವೇದಗಳಿಗೆ ಸಂಬಂಧಿಸಿದ ಶಬ್ದಗಳ ಉಚ್ಚಾರಣವಿಧಿಯು ಈ ಶಿಕ್ಷಾಶ್ಲೋಕಗಳ ಮೂಲಕ ತಿಳಿಸಲ್ಪಡುತ್ತಿದೆ.

ಈ ಮುಖಾಂತರ ಲೌಕಿಕ ಹಾಗೂ ವೈದಿಕ ಸಂಸ್ಕೃತಶಬ್ದಗಳು ಪ್ರತ್ಯೇಕ ಸ್ವರವಿಧಿಯನ್ನು ಹೊಂದಿತ್ತೆಂದು ತಿಳಿದು ಬರುತ್ತದೆ.

ವೈದಿಕಶಬ್ದಸ್ವರಪ್ರಕ್ರಿಯೆಗೆ ಸಂಬಂಧಿಸಿದ ಸೂತ್ರಗಳನ್ನು ಹೇಳುವ ಸಂದರ್ಭದಲ್ಲಿ ಪಾಣಿನೀಯ ಅಷ್ಟಾಧ್ಯಾಯಿಯಲ್ಲಿ ಪೂರ್ವಾಚಾರ್ಯನಾದ ಆಚಾರ್ಯಶಂತನುವು ಸಂಗ್ರಹಿಸಿದ ಲೋಕವೇದಶಬ್ದಗಳಿಗೆ ಸಂಬಂಧಿಸಿದ ಸ್ವರಪ್ರಕ್ರಿಯಾಸೂತ್ರಗಳನ್ನು ಆಚಾರ್ಯರಿಗೆ ಗೌರವಸಲ್ಲಿಸಲೋಸುಗ ತಮ್ಮ ಸ್ವರಸೂತ್ರಮಧ್ಯದಲ್ಲಿ ಸ್ಥಾನ ನೀಡಿದ್ದಾರೆ. ಇದು ಪಾಣಿನಿ ಹಾಗೂ ಆತನ ಶಿಷ್ಯಪರಂಪರೆಗೆ ಪ್ರಾಚೀನರ ಬಗೆಗಿದ್ದ ಗೌರವಭಾವನೆಯನ್ನು ಸೂಚಿಸುತ್ತದೆ.

ವೇದಸ್ವರವನ್ನು ತಿಳಿಯಬಯಸುವವರು ಆಯಾ ವೇದಕ್ಕೆ ಸಂಬಂಧಿಸಿದ ಶಿಕ್ಷಾಗ್ರಂಥಗಳು ಹಾಗೂ ಪ್ರಾತಿಶಾಖ್ಯಗಳ ಜತೆಗೆ ಪಾಣಿನೀಯ ವೈದಿಕಸೂತ್ರಗಳು ಹಾಗೂ ಆಚಾರ್ಯಶಂತನು ಪ್ರಣೀತವಾದ ಫಿಟ್‌ಸೂತ್ರಗಳನ್ನೂ ವ್ಯಾಖ್ಯಾನ ಸಹಿತವಾಗಿ ತಿಳಿಯುವುದು ಪೂರ್ಣತೆಯ ದೃಷ್ಟಿಯಿಂದ ಉತ್ತಮವೆಂದು ನನ್ನ ಭಾವನೆ. ನಾನು ವೇದಸ್ವರವನ್ನು ತಿಳಿಯಲು ಆರಂಭಿಸಿದಂದಿನಿಂದಲೂ ಫಿಟ್ ಸೂತ್ರಗಳನ್ನು ನೋಡುತ್ತಿದ್ದೆ. ಈ ಬಾರಿ ಈ ಸೂತ್ರಗಳ ಸಾಮಾನ್ಯಜ್ಞಾನವನ್ನು ಪಡೆಯಲು ಉದ್ದೇಶಿಸಿ ಅಧ್ಯಯನಕ್ಕೆ ತೊಡಗಿ ಕನ್ನಡದಲ್ಲಿ ಅರ್ಥಬರೆಯತೊಡಗಿ ಉದಾಹರಣೆಗಳೊಂದಿಗೆ ಸಮನ್ವಯಿಸಿ ಜಿಜ್ಞಾಸುಗಳಿಗೆ ನೀಡಲಿಚ್ಛಿಸಿದೆ. ಆ ಸಂದರ್ಭದಲ್ಲಿ ಪ್ರಾಯೋಜಕರನ್ನು ಹುಡುಕುವ ಸಂದರ್ಭದಲ್ಲಿ ನನ್ನ ಆತ್ಮೀಯ ಶಿಷ್ಯರಾದ ಬೆರ್ಕೆ ಶ್ರೀ ರಘುಪತಿ ಆಚಾರ್ಯ ಹಾಗೂ ಬೆರ್ಕೆ ಶ್ರೀ ಭಾಸ್ಕರಾಚಾರ್ಯ ಅವರು "ಶ್ರೀ ಬೆರ್ಕೆ ಗುರುರಾಜ ಆಚಾರ್ಯರು ಇಂತಹ ಕೆಲಸಕ್ಕೆ ಖಂಡಿತ ಸಹಾಯ ಮಾಡುವರೆ"ಂದು ಭರವಸೆ ನೀಡಿದರು. ಅದರಂತೆ ಈ ಕೃತಿಯನ್ನು ತಮ್ಮ ತಂದೆಯವರಾದ ದಿ। ಸಾಣೂರು ಅನಂತಾಚಾರ್ಯರ ಸ್ಮರಣಾರ್ಥ ಪ್ರಕಟಿಸಲು ಪ್ರಾಯೋಜನೆ ಮಾಡಿದ ಬೆರ್ಕೆ ಶ್ರೀ ಗುರುರಾಜ ಆಚಾರ್ಯರು ಹಾಗೂ ಅವರ ಕುಟುಂಬದವರು ಶ್ರೀಪ್ರಾಣೇಶವೇದನಾರಾಯಣನ ಅಪೂರ್ವಸೇವೆ

ಮಾಡಿ ಅನಂತಾನುಗ್ರಹಕ್ಕೆ ಪಾತ್ರರಾಗಲೆಂದು ಶ್ರೀಕೃಷ್ಣಮುಖ್ಯಪ್ರಾಣರಲ್ಲಿ ನನ್ನ ಭಕ್ತಿಪೂರ್ವಕ ಪ್ರಾರ್ಥನೆ.

* * *

## ಕೃತಜ್ಞತೆಗಳು

ನನ್ನ ಇಷ್ಟದೇವರಾದ ಪ್ರಾಣೇಶನಾದ ಗುರುಮಧ್ವೇಶಕೃಷ್ಣಪರಮಾತ್ಮನಿಗೆ ಭಕ್ತಿಪೂರ್ವಕ ಅನಂತಾನಂತ ಪ್ರಣಾಮಗಳು.

ಮನೋವಿದ್ಯೆಗಳಿಗೆ ಅಭಿಮಾನಿಯಾದ ಕದಿರೆಯ ಶ್ರೀಮಂಜುನಾಥೇಶ್ವರ ದೇವರಿಗೆ ಭಕ್ತಿಪೂರ್ವಕ ಪ್ರಣಾಮಗಳು.

ಜನ್ಮನೀಡಿದ ತಾಯಿತಂದೆಯರಿಗೆ ಅನಂತ ನಮನಗಳು. ನನಗೆ ವೇದಮಂತ್ರಗಳನ್ನು ಉಪದೇಶಿಸಿದ ಎಲ್ಲಾ ಗುರುಗಳಿಗೂ ಹಾಗೂ ಸಂಸ್ಕೃತಜ್ಞಾನ ಬರಲು ಕಾರಣರಾದ ಎಲ್ಲಾ ಗುರುಗಳಿಗೂ ಅನಂತ ನಮನಗಳು.

ಶುಭಾಶಂಸನೆ ನೀಡಿದ ಶ್ರೀ ಕಮಲಾದೇವಿಪ್ರಸಾದ ಆಸ್ರಣ್ಣ ಹಾಗೂ ಶ್ರೀಹರಿನಾರಾಯಣ ಆಸ್ರಣ್ಣ ಅವರಿಗೆ ಹಾರ್ದಿಕ ಧನ್ಯವಾದಗಳು.

ಶುಭಸಂದೇಶ ನೀಡಿದ ನಮ್ಮ ಆತ್ಮೀಯ ಶಿಷ್ಯರಾದ ವಿನಯಜ್ಞಾನಸಂಪನ್ನರೂ ಪರೋಪಕಾರಿಗಳೂ ಆದ ವೇದಮೂರ್ತಿ ಶ್ರೀ ಮುರಳೀಧರತಂತ್ರಿಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳು. ನಮ್ಮನ್ನು ಸದಾ ಪ್ರೋತ್ಸಾಹಿಸುತ್ತಿರುವ ಶ್ರೀ ಪ್ರದೀಪ ಕುಮಾರ ಕಲ್ಕೂರರಿಗೆ ಧನ್ಯವಾದಗಳು.

ಗ್ರಂಥಪ್ರಾಯೋಜಕರಾದ ಶ್ರೀ ಗುರುರಾಜ ಆಚಾರ್ಯರಿಗೆ ಅನಂತಾನಂತ ಕೃತಜ್ಞತೆಗಳು.

ಪ್ರಾಯೋಜಕರನ್ನು ತೋರಿಸಿಕೊಟ್ಟ ಶ್ರೀ ರಘುಪತಿ ಆಚಾರ್ಯ ಹಾಗೂ ಶ್ರೀ ಭಾಸ್ಕರ ಆಚಾರ್ಯ ಅವರಿಗೆ ಸಲ್ಲಿಸುವ ಹೃತ್ಪೂರ್ವಕ ಕೃತಜ್ಞತೆಗಳು. ವೇದಪಾಠಶಾಲೆಯ ಕಿರುಪರಿಚಯವನ್ನಿತ್ತ ಶ್ರೀಮತಿ ಇಂದಿರಾ ಆರ್. ಆಚಾರ್ಯರಿಗೆ ಧನ್ಯವಾದಗಳು.

ಹಲವು ವಿಧದಿಂದ ಸಹಕರಿಸಿದ ನನ್ನ ಮಡದಿ ಅನುಪಮಾ ಹಾಗೂ ಮಕ್ಕಳಾದ ಚೈತ್ರಾ, ವರ್ಷಾ ಹಾಗೂ ಮಧ್ವೇಶಕೃಷ್ಣನಿಗೆ ಪ್ರೀತಿಯಿಂದ ಮಾಡುವ ಆಶೀರ್ವಾದಗಳು.

ಡಿ.ಟಿ.ಪಿ ಮಾಡಿ ಸಹಕರಿಸಿದ ಶ್ರೀ ಪದ್ಮನಾಭ ಕೇಕುಣ್ಣಾಯರಿಗೆ ಸಲ್ಲಿಸುವ ಕೃತಜ್ಞತೆಗಳು. ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಇತರೆಲ್ಲರಿಗೂ ಸಲ್ಲಿಸುವ ಹೃತ್ಪೂರ್ವಕ ಕೃತಜ್ಞತೆಗಳು.

ಡಾ। ಕದ್ರಿ ಪ್ರಭಾಕರ ಅಡಿಗ

# ಗ್ರಂಥಪರಿಚಯ

ವೇದಮಂತ್ರಗಳಿಗೆ ಸಂಬಂಧಿಸಿದ ಪುಸ್ತಕಗಳು ಸಂಸ್ಕೃತ, ತೆಲುಗು, ಕನ್ನಡ ಹಾಗೂ ಇತರ ಲಿಪಿಗಳಲ್ಲಿ ಸುಲಭವಾಗಿ ಸಿಗುತ್ತವೆ. ಇತರೆಲ್ಲಾ ಲಿಪಿಗಳು ಪ್ರಸಿದ್ಧ ವಾಗುವ ಮೊದಲು ಅವಿಭಜಿತ ದಕ್ಷಿಣಕನ್ನಡದಲ್ಲಿ ತುಳು(ತಿಗಳಾರಿ)ಲಿಪಿಯೆಂದು ಪ್ರಸಿದ್ಧವಾದ ಲಿಪಿಯಲ್ಲಿ ಬರೆದ ಓಲೆಗರಿಗ್ರಂಥಗಳು ತುಂಬಾ ಪ್ರಸಿದ್ಧವಾಗಿದ್ದವು.

ಆದರೆ ವೇದಮಂತ್ರಗಳಿಗೆ ಸಂಬಂಧಿಸಿದ ಉದಾತ್ತಾದಿ ಸ್ವರಸಂಬಂಧಿಯಾದ ಗ್ರಂಥಗಳು ಅವುಗಳ ಮೂಲಸಂಸ್ಕೃತಭಾಷೆ ಹಾಗೂ ದೇಶಭಾಷೆಯಾದ ಹಿಂದಿ ಭಾಷೆಯಲ್ಲಿ ತುಂಬಾ ಮುದ್ರಿತವಾಗಿರುವುದನ್ನು ಕಾಣಬಹುದು. ಆದರೆ ಕನ್ನಡ ಭಾಷೆಯಲ್ಲಿ ನಾನು ತಿಳಿದಂತೆ ವೇದದ ಅರ್ಥಕ್ಕೆ ಸಂಬಂಧಿಸಿದಂತೆ ಹತ್ತಾರು ಪುಸ್ತಕಗಳಿದ್ದರೂ ಸ್ವರಕ್ಕೆ ಸಂಬಂಧಿಸಿದ ಗ್ರಂಥಗಳು ವಿರಳವೆಂದರೂ ತಪ್ಪಾಗ ಲಾರದು.ಈ ಉದ್ದೇಶದಿಂದ ನಾನು ಸುಮಾರು ಹತ್ತು ವರ್ಷಗಳ ಹಿಂದೆ ವೈದಿಕಸ್ವರ ಹಾಗೂ ಛಂದಸ್ಸಿಗೆ ಸಂಬಂಧಿಸಿದ ಎರಡು ಪುಸ್ತಕಗಳನ್ನು ರಚಿಸಿದ್ದೆ. ಅದನ್ನು ಪಲಿಮಾರುಶ್ರೀಗಳು ತಮ್ಮ ತತ್ವಸಂಸತ್ ಎಂಬ ಸಂಸ್ಥೆಯಿಂದ ಪ್ರಕಾಶಿಸಿದ್ದರು. ಮುಂದೆ ಸುಬ್ರಹ್ಮಣ್ಯಶ್ರೀಗಳ ಸಂಶೋಧನಸಂಸ್ಥೆಯಿಂದ ನಾನು ಕನ್ನಡದಲ್ಲಿ ಅನುವಾದಿಸಿದ "ಪಾಣಿನೀಯ ಶಿಕ್ಷಾ" ಕೃತಿಯೂ ಬಿಡುಗಡೆಯಾಯಿತು.

ಇನ್ನೂ ಸ್ವರ ಗ್ರಂಥಗಳನ್ನು ಅಧ್ಯಯನ ಮಾಡಿ ವೇದಸೇವೆ ಮಾಡಬೇಕೆಂದು ಇಚ್ಛಿಸಿ ಈ ಗ್ರಂಥಾನುವಾದ ಮಾಡಿದೆ. ಗ್ರಂಥ ಅರ್ಥವಾಗಬೇಕಾದರೆ ವೇದಾಕ್ಷರ ಸಂಧಿಸ್ವರಾದಿ ವಿಷಯಗಳನ್ನು ಈ ಕೃತಿಯ ಎರಡನೆಯ ಭಾಗವಾಗಿ ಪ್ರಕಟಿಸಿದ್ದೇನೆ. ಇದರಲ್ಲಿ ಅಕ್ಷರಗಳು, ಅಕ್ಷರಸಂಧಿಗಳು, ಸ್ವರಗಳು, ಸಂಧಿಯಲ್ಲಾಗುವ ಸ್ವರವ್ಯತ್ಯಾಸಗಳು ಹಾಗೂ ವೇದಾಧ್ಯಾಯಿಗಳು ಅವಶ್ಯವಾಗಿ ತಿಳಿಯಬೇಕಾದ ಕೆಲವು ವಿಷಯಗಳನ್ನೂ ಬರೆದಿದ್ದೇನೆ. ಇವುಗಳು ವೇದಾಧ್ಯಾಯಿಗಳಿಗೆ ಸಹಾಯವಾಗುವುದೆಂದು ನಂಬಿದ್ದೇನೆ.

ಇನ್ನು ವೇದದ ಪ್ರಕೃತಿ ವಿಕೃತಿ ಪಾಠಗಳ ಸಾಮಾನ್ಯಪರಿಚಯ ಬಯಸುವ ಜಿಜ್ಞಾಸುಗಳಾದ ವೇದಾಧಿಕಾರಿಗಳ ಸಾಮಾನ್ಯ ತಿಳಿವಳಿಕೆಗಾಗಿ 'ಸ್ವಾಧ್ಯಾಯಮಂಡಲ ಪಾರಡಿ' ಇವರು ೧೯೪೦ರಲ್ಲಿ ಪ್ರಕಟಿಸಿದ್ದ ಋಗ್ವೇದಸಂಹಿತಾಗ್ರಂಥದ ಕೊನೆಯಲ್ಲಿ ದೇವನಾಗರೀಲಿಪಿಯಲ್ಲಿ ಪ್ರಕಟಿಸಿದ್ದ "ಅಷ್ಟೌ ವಿಕೃತಯಃ" ಎಂಬ ವೇದಮಂತ್ರಗಳ ಪ್ರಕೃತಿವಿಕೃತಿಗೆ ಸಂಬಂಧಿಸಿದ ಲಕ್ಷಣಲಕ್ಷ್ಯ ಹಾಗೂ ಪ್ರಮಾಣಕ್ಕೆ ಸಂಬಂಧಿಸಿದ ವಿಚಾರಗಳನ್ನು ಇಲ್ಲಿ ಕನ್ನಡಲಿಪಿಯಲ್ಲಿ ಪ್ರಕಟಿಸಿದ್ದೇವೆ. ಇದರಿಂದಾಗಿ ಮಂತ್ರಪಠಣ ದಲ್ಲಿ ಪೂರ್ಣತೆಯನ್ನು ಸಾಧಿಸಬಹುದೆಂದು ನನ್ನ ಅಭಿಪ್ರಾಯ.

ಈ ಕೃತಿಯ ಮುಖ್ಯಭಾಗವಾದ ಮೊದಲನೆಯ ಭಾಗವು ಪಾಣಿನಿ–ಪತಂಜಲಿಗಳಿಂದಲೂ ಪ್ರಾಚೀನವಾದುದು. ಆಚಾರ್ಯಶಂತನುವಿನಿಂದ ರಚಿತವಾಗಿರುವುದರಿಂದ ಶಾಂತನವಸೂತ್ರಗಳೆನಿಸಿವೆ. ವೈದಿಕಶಬ್ದಸ್ವರಕ್ಕೆ ಸಂಬಂಧಿಸಿದ ಒಟ್ಟು ನಾಲ್ಕು ಪಾದಗಳಿಂದ ಕೂಡಿದ ಈ ಗ್ರಂಥದಲ್ಲಿ ಒಟ್ಟು ೮೭ ಸೂತ್ರಗಳಿವೆ. ಕ್ರಮವಾಗಿ ೨೩, ೨೬, ೧೯ ಹಾಗೂ ೧೯ ಸೂತ್ರಗಳಿವೆ. ಮೊದಲ ಪಾದದಲ್ಲಿ ಪ್ರಾತಿಪದಿಕಕ್ಕೆ ಅಂತೋದಾತ್ತತ್ವ ವಿಧಾನ ಮಾಡುತ್ತಾರೆ. ದ್ವಿತೀಯ ಪಾದದಲ್ಲಿ ಆದ್ಯುದಾತ್ತತ್ವವನ್ನು ವಿಧಾನ ಮಾಡುತ್ತಾರೆ. ತೃತೀಯಪಾದದಲ್ಲಿ ದ್ವಿತೀಯಾಕ್ಷರಕ್ಕೆ ಉದಾತ್ತತ್ವವನ್ನು ವಿಧಿಸುತ್ತಾರೆ. ಚತುರ್ಥಪಾದದಲ್ಲಿ ಪರ್ಯಾಯಕ್ರಮದಿಂದ ಪ್ರಥಮ, ದ್ವಿತೀಯ, ತೃತೀಯಾಕ್ಷರಗಳಿಗೆ ಉದಾತ್ತವನ್ನು ವಿಧಿಸುತ್ತಾರೆ. ಕೊನೆಯಲ್ಲಿ ಸ್ವರಿತ, ಆದಿಸ್ವರಿತ, ಅಂತಸ್ವರಿತಶಬ್ದಗಳನ್ನು ಸೂತ್ರಗಳಿಂದ ಸ್ಪಷ್ಟಪಡಿಸುತ್ತಾರೆ. ನಿತ್ಯಾನುದಾತ್ತಶಬ್ದಗಳನ್ನು ನಿಪಾತ–ಉಪಸರ್ಗಗಳ ಸ್ವರವನ್ನೂ ಸೂತ್ರಮೂಲಕ ಸ್ಪಷ್ಟಪಡಿಸುತ್ತಾರೆ.

"ಜ್ಯೇಷ್ಠಕನಿಷ್ಠಯೋಃ ವಯಸಿ" (೧.೨೨) ಎಂಬಿತ್ಯಾದಿ ಕೆಲವು ಸೂತ್ರಗಳಲ್ಲಿ ಸ್ವರವ್ಯತ್ಯಾಸದಿಂದ ಅರ್ಥವ್ಯತ್ಯಾಸವನ್ನೂ ಸೂಚಿಸಿದ್ದಾರೆ. ಲೌಕಿಕ ಹಾಗೂ ವೈದಿಕ ಶಬ್ದಗಳಲ್ಲಿ ಆಗುವ ಸ್ವರಬದಲಾವಣೆಯನ್ನೂ ಸೂತ್ರಗಳಲ್ಲಿ ನಾವು ಕಾಣಬಹುದು. ಹೀಗೆ ಶಬ್ದಸ್ವರಕ್ಕೆ ಸಂಬಂಧಿಸಿದ ಚಿಕ್ಕ ಪುಸ್ತಕವಾದರೂ ಅಧ್ಯಯನಯೋಗ್ಯವೇ ಆಗಿದೆ. ಇನ್ನೂ ಹಲವು ವಿಚಾರಗಳನ್ನು ವೈದಿಕಶಬ್ದಗಳೊಂದಿಗೆ ಸಮನ್ವಯ ಮಾಡಿಯೇ ಸ್ಪಷ್ಟಪಡಿಸಿಕೊಳ್ಳಬೇಕಷ್ಟೆ. ವೈದಿಕಸ್ವರಪ್ರವೇಶ ಮಾಡುವವರ ಅನುಕೂಲತೆಗಾಗಿ ಈ ಗ್ರಂಥವನ್ನು ಕನ್ನಡದಲ್ಲಿ ವ್ಯಾಖ್ಯಾನಿಸಿದ್ದೇನೆ.

ಈ ಕೃತಿಯ ಮೂರನೆಯ ಭಾಗವಾಗಿ ಋಗ್ವೇದದ ಪ್ರಕೃತಿ–ವಿಕೃತಿಪಾಠದ ಲಕ್ಷಣ–ಲಕ್ಷ್ಯಸಮನ್ವಯವನ್ನು ನೀಡಿದ್ದೇನೆ. ಇದು ವೇದಮಂತ್ರಗಳ ಉಚ್ಚಾರಣಾ ವೈವಿಧ್ಯವನ್ನು ವಿವರಿಸುತ್ತದೆ.

ಈ ಎಲ್ಲಾ ವಿಚಾರಗಳನ್ನು ತಿಳಿಸುವಲ್ಲಿ ಈ ಕೃತಿಯು ತುಂಬಾ ಸಹಕಾರಿಯಾಗುವುದೆಂಬ ವಿಶ್ವಾಸವನ್ನು ಹೊಂದಿದ್ದೇನೆ. ಆಸಕ್ತರು ಪ್ರಯೋಜನ ಪಡೆದುಕೊಂಡರೆ ನನ್ನ ಪರಿಶ್ರಮ ಸಾರ್ಥಕವೆಂದು ನನ್ನ ಭಾವನೆ. ನಾನು ಬರೆದ ವಿಚಾರದಲ್ಲಿ ವ್ಯತ್ಯಾಸವಿದ್ದರೆ ವಿಶೇಷಾಧ್ಯಯನದ ಮೂಲಕ ಅಥವಾ ಹೆಚ್ಚು ತಿಳಿದವರ ಮೂಲಕ ತಿಳಿದು ಸರಿಪಡಿಸಿಕೊಳ್ಳಬೇಕಾಗಿಯೂ ವಿನಮ್ರನಾಗಿ ವಿನಂತಿಸಿಕೊಳ್ಳುತ್ತಿರುವ,

ಶ್ರೀಹರಿಗುರುಸೇವಕ

**ವಿ. ವೇ. ಮೂ. ಡಾ। ಕದ್ರಿ ಪ್ರಭಾಕರ ಅಡಿಗ**
ಮಧ್ವೇಶನಿಲಯ. ಕದ್ರಿ, ಮಂಗಳೂರು

# ಸಂಕ್ಷೇಪಾಕ್ಷರಸೂಚೀ

| | | |
|---|---|---|
| ಅ.ಕೋ | – | ಅಮರಕೋಶ |
| ಪಾ.ಸೂ | – | ಪಾಣಿನೀಯಸೂತ್ರ |
| ದ.ಸ್ಮೃ | – | ದಕ್ಷಸ್ಮೃತಿ |
| ಪ್ರಾ.ಶಾ | – | ಪ್ರಾತಿಶಾಖ್ಯ |
| ಫಿ.ಸೂ | – | ಫಿಟ್ ಸೂತ್ರಾಣಿ |
| ಋ.ಸಂ | – | ಋಕ್ ಸಂಹಿತಾ |
| ಪಾ | – | ಪಾಣಿನೀಯಸೂತ್ರ |
| ಶೇ | – | ಶೇಖರಕಾರ |
| ಋ.ಅ.ವ.ಮ | – | ಋಗ್ವೇದ–ಅಷ್ಟಕ–ವರ್ಗ–ಮಂತ್ರ |
| ಮಂ.ಸೂ.ಮಂ | – | ಮಂಡಲ–ಸೂತ್ರ–ಮಂತ್ರ |
| ಸು.ವ್ಯಾ | – | ಸುಬೋಧವ್ಯಾಖ್ಯಾನ |

*************

# ಅವಲೋಕಿತಗ್ರಂಥಗಳು


| | |
|---|---|
| ಸಿದ್ಧಾಂತಕೌಮುದೀ | ಭಟ್ಟೋಜಿದೀಕ್ಷಿತರು |
| ಫಿಟ್ಸೂತ್ರಾರ್ಥವಿವರಣಮ್ | ಸೋಮಲೇಖಾ |
| ಋಗ್ವೇದಪ್ರಾತಿಶಾಖ್ಯಮ್ | ಶೌನಕಾಚಾರ್ಯ |
| ಋಕ್ಸಂಹಿತಾ | ಪಾರಡಿಪ್ರಕಾಶನಮ್ |
| ಅಮರಕೋಶ | ಅಮರಸಿಂಹ |

# ವಿಷಯಾನುಕ್ರಮಣಿಕೆ



* * *

ಶ್ರೀಹರಿಗುರುಭ್ಯೋ ನಮಃ

# ಅಥ ಫಿಟ್‌ಸೂತ್ರಪ್ರಕರಣಮ್

## ಮಂಗಲಾಚರಣಮ್

ಸರ್ವವೇದೈಕವೇದ್ಯಾಯ ಗುರವೇ ವಿಷ್ಣುರೂಪಿಣೇ ।
ಮಧ್ವರೂಪಾಯ ಪ್ರಾಣಾಯ ನಮೋ ವೈ ತತ್ವವಾದಿನೇ ॥
ಸ್ವರಾಕ್ಷರಪದೈರ್ವಾಕ್ಯೈರ್ಮಂತ್ರೈರಧ್ಯಾಯಪರ್ವಭಿಃ ।
ಸರ್ವಶಾಸ್ತ್ರೈಕವೇದ್ಯಾಯ ಪ್ರಾಣನಾಥಾಯ ತೇ ನಮಃ ॥

* * *

## ಪ್ರಥಮಃ ಪಾದಃ

**ಪಾದಗಳು ೪**

ಪಾದದಲ್ಲಿ ಸೂತ್ರಸಂಖ್ಯೆ [೧-೨೩] [೨-೨೬] [೩-೧೯] [೪-೧೯]
ಒಟ್ಟು ಸೂತ್ರಸಂಖ್ಯೆ – ೮೭

* * *

## ಅಥ ಫಿಟ್–ಸೂತ್ರಾಣಿ

**ಸೂತ್ರ ೧ :** **ಫಿಷೋಽಂತ ಉದಾತ್ತಃ (೧.೧)**

**ಸೂತ್ರಾರ್ಥಃ –** ಫಿಷೋಽಂತ ಉದಾತ್ತೋ ಭವತಿ । ಉಚ್ಚೈಃ । ನೀಚೈಃ ।

**ಸೂತ್ರಾರ್ಥ –** ಪ್ರಾಚೀನ ಆಚಾರ್ಯರುಗಳು ಪ್ರಾತಿಪದಿಕವನ್ನು "ಫಿಷ್" ಎಂಬ ಸಂಜ್ಞೆಯಿಂದ ಕರೆದಿದ್ದಾರೆ. ಪ್ರಾತಿಪದಿಕವು ಅಂತೋದಾತ್ತವಾಗಿರುತ್ತದೆ ಎನ್ನುತ್ತದೆ ಈ ಸೂತ್ರ. ಉದಾ –

**ಉಚ್ಚೈಃ । ನೀಚೈಃ**

ಇಲ್ಲಿ **"ಫಿಷಃ"** ಎಂಬುದು ಷಷ್ಠ್ಯಂತ ಶಬ್ದರೂಪ.

**ಫಿಟ್ ಸೂತ್ರಕಾರನು ತನ್ನ ಸೂತ್ರಗಳಲ್ಲಿ ಬಳಸುವ ಸಂಜ್ಞೆಗಳು–**

೧ ಫಿಟ್ – ಪ್ರಾತಿಪದಿಕಸಂಜ್ಞೆ
೨ ನಪ್ – ನಪುಂಸಕಲಿಂಗಸಂಜ್ಞೆ
೩ ಸ್ಫಿಗ್ – ಲುಪ್ ಸಂಜ್ಞೆ
೪ ಯಮನ್ವಾ – ವೃದ್ಧಿಸಂಜ್ಞೆ
೫ ಅಷ್ – ಅಚ್ ಸಂಜ್ಞೆ
೬ ಹಯ್ – ಹಲ್ ಸಂಜ್ಞೆ

* * *

**ಸೂತ್ರ ೨ : ಪಾಟಲಾऽಪಾಲಂಕಾऽಂಬಾಸಾಗರಾರ್ಥಾನಾಮ್ (೧.೨)**

**'ಫಿಷ ಅಂತ ಉದಾತ್ತಃ'** ಎಂಬುದು ಅನುವೃತ್ತಿಯನ್ನು ಹೊಂದಿದೆ.

**ಸೂತ್ರಾರ್ಥಃ** – ಪಾಟಲಾರ್ಥಾನಾಮ್ ಅಪಾಲಂಕಾರ್ಥಾನಾಮ್ ಅಂಬಾರ್ಥಾನಾಂ ಸಾಗರಾರ್ಥಾನಾಂ ಚ ಪ್ರಾತಿಪದಿಕಾನಾಮ್ ಅಂತ ಉದಾತ್ತೋ ಭವತಿ ।

**ಸೂತ್ರಾರ್ಥಃ** – ಪಾಟಲಾವಾಚಿ, ಅಪಾಲಂಕವಾಚಿ, ಅಂಬಾವಾಚಿ ಹಾಗೂ ಸಾಗರವಾಚಿ ಪ್ರಾತಿಪದಿಕಗಳು ಅಂತೋದಾತ್ತವಾಗುತ್ತವೆ. ಉದಾ–

**ಪಾಟಲಾ । ಫಲೇರುಹಾ ॥ ಅಪಾಲಂಕಃ । ಆರಗ್ವಧಃ ॥ ಅಂಬಾ । ಮಾತಾ ॥ ಸಾಗರಃ । ಸರಿತ್ಪತಿಃ ॥**

ಪಾಟಲಪರ್ಯಾಯ ಪದಗಳು–

**ಪಾಟಲಿಃ ಪಾಟಲಾऽಮೋಘಾ ಮಧುದೂತೀ ಫಲೇರುಹಾ ।**
**ಕೃಷ್ಣವೃಂತಾ ಕುಬೇರಾಕ್ಷೀ ಕಾಲಸ್ಥಾಲ್ಯಲಿವಲ್ಲಭಾ ॥** (ಭಾವಪ್ರಕಾಶ)

**ಅಮೋಘಾ । ಮಧುದೂತೀ । ಫಲೇರುಹಾ । ಕೃಷ್ಣವೃಂತಾ । ಕುಬೇರಾಕ್ಷೀ । ಕಾಲಸ್ಥಾಲೀ । ಅಲಿವಲ್ಲಭಾ । ಸುರೂಪಾ । ಪಾಕಲಾ ॥**

ಈ ಮೇಲೆ ಹೇಳಿದೆಲ್ಲಾ ಪಾಟಲಪರ್ಯಾಯಶಬ್ದಗಳೂ ಅಂತ್ಯೋದಾತ್ತವಾಗುತ್ತವೆ.

ಅಪಾಲಂಕಪರ್ಯಾಯಶಬ್ದಗಳು-

ಆರಗ್ವಧೋ ರಾಜವೃಕ್ಷಃ ಶಯಾಕಶ್ಚತುರಂಗುಲಃ ।
ಆರೇವತೋ ವ್ಯಾಧಿಘಾತಃ ಕೃತಮಾಲಃ ಸುವರ್ಣಕಃ ॥ (ಭಾವಪ್ರಕಾಶಿಕಾ)

ರಾಜವೃಕ್ಷಃ । ಶಯಾಕಃ । ಚತುರಂಗುಲಃ । ಆರೇವತಃ । ವ್ಯಾಧಿಘಾತಃ। ಕೃತಮಾಲಃ ಸುವರ್ಣಃ ॥

ಸಾಗರಶಬ್ದಪರ್ಯಾಯವಾಚಿಶಬ್ದಗಳು-

ಸಮುದ್ರೋಽಬ್ಧಿರಕೂಪಾರಃ ಪಾರಾವಾರಃ ಸರಿತ್ಪತಿಃ ।
ಉದನ್ವಾನುದಧಿಃ ಸಿಂಧುಃ ಸರಸ್ವಾನ್ ಸಾಗರೋರ್ಣವಃ ॥

ರತ್ನಾಕರೋ ಜಲನಿಧಿರ್ಯಾದಃಪತಿರಪಾಂಪತಿಃ ।
ತಸ್ಯ ಪ್ರಭೇದಾಃ ಕ್ಷೀರೋದೋ ಲವಣೋದಸ್ತಥಾಪರೇ ॥

ಸಮುದ್ರಃ । ಅಬ್ಧಿಃ । ಅಕೂಪಾರಃ । ಪಾರಾವಾರಃ । ಸರಿತ್ಪತಿಃ । ಉದನ್ವಾನ್ । ಉದಧಿಃ । ಸಿಂಧುಃ । ಸರಸ್ವಾನ್ । ಸಾಗರಃ । ಅರ್ಣವಃ॥ ರತ್ನಾಕರಃ । ಜಲಧಿಃ । ಯಾದಃಪತಿಃ । ಅಪಾಂಪತಿಃ । ಕ್ಷೀರೋದಃ । ಲವಣೋದಃ ॥

* * *

ಸೂತ್ರ ೩ : ಗೇಹಾರ್ಥಾನಾಮ್ ಅಸ್ತ್ರಿಯಾಮ್ (೧.೩)

ಸೂತ್ರಾರ್ಥಃ – ಸ್ತ್ರೀಲಿಂಗವರ್ಜಿತಾನಾಂ ಗೇಹಾರ್ಥಾನಾಂ ಪ್ರಾತಿಪದಿಕಾನಾಮ್ ಅಂತ ಉದಾತ್ತೋ ಭವತಿ ।

ಸೂತ್ರಾರ್ಥ – ಸ್ತ್ರೀಲಿಂಗವರ್ಜಿತಗಳಾದ ಗೇಹಾರ್ಥಕ ಪ್ರಾತಿಪದಿಕಗಳು ಅಂತೋದಾತ್ತಗಳಾಗುತ್ತವೆ.

ಅಮರಕೋಶದಲ್ಲಿ ಗೇಹಪರ್ಯಾಯಪದಗಳನ್ನು ಪಟ್ಟಿಮಾಡಿದ್ದಾರೆ ಅವು ಹೀಗಿವೆ-

ಗೃಹಂ ಗೇಹೋದವಸಿತಂ ವೇಶ್ಮ ಸದ್ಮ ನಿಕೇತನಮ್ ।
ನಿಶಾಂತವಸ್ತ್ಯಸದನಂ ಭವನಾಗಾರಮಂದಿರಮ್ ॥

ಗೃಹಾಃ ಪುಂಸಿ ಚ ಭೂಮ್ನ್ಯೇವ ನಿಕಾಯ್ಯನಿಲಯಾಲಯಾಃ ॥
(ಅ.ಕೋ. ೨.೨.೬)

ಇಲ್ಲಿ ಗೇಹಪರ್ಯಾಯ ವಾಚಿಯಾದ ಕೆಲವು ಶಬ್ದಗಳನ್ನು ನೀಡಿದ್ದಾರೆ . ಅವುಗಳಲ್ಲಿ ೧೨ ಶಬ್ದಗಳು ನಪುಂಸಕಲಿಂಗಗಳಾಗಿವೆ. ಉಳಿದವೆಲ್ಲಾ ಪುಲ್ಲಿಂಗ ಗಳಾಗಿವೆ.

**ಗೃಹಮ್ । ಗೇಹಮ್ । ಉದವಸಿತಮ್ । ವೇಶ್ಮ । ಸದ್ಮ । ನಿಕೇತನಮ್ । ನಿಶಾಂತಮ್ । ವಸ್ತ್ಯಮ್ (ಪಸ್ತ್ಯಮ್) । ಸದನಮ್ । ಭವನಮ್ । ಅಗಾರಮ್ । ಮಂದಿರಮ್ ।**

ಸಭಾಭವನಾರ್ಥದಲ್ಲಿರುವ ಗೃಹಪರ್ಯಾಯವಾಚಕಶಬ್ದಗಳು .

**ಗೃಹಾಃ । ನಿಕಾಯ್ಯಃ (ನಿಕಾಯಃ) । ನಿಲಯಃ । ಆಲಯಃ ॥**

**ವಾಸಃ** । ಇದೂ ಗೃಹಪರ್ಯಾಯವಾಚಿಶಬ್ದವಾಗಿದ್ದು ಅಂತೋದಾತ್ತವಾಗಿದೆ.

ಸೂತ್ರದಲ್ಲಿ 'ಅಸ್ತ್ರಿಯಾಮ್' ಎಂದಿರುವುದರಿಂದ ಗೃಹಪರ್ಯಾಯವಾಚಿಯಾದ **'ಕುಟೀ'** ಶಬ್ದವು ವಿಕಲ್ಪವಾಗಿ ಸ್ತ್ರೀಲಿಂಗವಾಗಿರುವುದರಿಂದ ಸ್ತ್ರೀಲಿಂಗವಾಗಿರುವಾಗ ಆದ್ಯುದಾತ್ತವಾಗುತ್ತದೆ. ಪುಲ್ಲಿಂಗವಾದರೆ ಅಂತ್ಯೋದಾತ್ತವಾಗುತ್ತದೆ.

ಹೀಗೆಯೇ ಗೇಹವಾಚಿಯಾದ ಶಾಲಾ ಹಾಗೂ ಸಭಾ ಶಬ್ದಗಳು ಸ್ತ್ರೀಲಿಂಗ ವಾಗಿರುವುದರಿಂದ ಅಂತೋದಾತ್ತವಾಗುವುದಿಲ್ಲ. ಅಂದರೆ ಆದ್ಯುದಾತ್ತವಾಗು ತ್ತದೆಯೆಂದು ತಿಳಿಯಬೇಕು. ಆದ್ಯುದಾತ್ತವಾದರೆ– **ಶಾಲಾ, ಸಭಾ** ಎಂದಾಗುತ್ತದೆ.

* * *

**ಸೂತ್ರ ೪ : ಗುದಸ್ಯ ಚ (೧.೪)**

**ಸೂತ್ರಾರ್ಥಃ** – ಸ್ತ್ರೀಲಿಂಗವರ್ಜಿತಸ್ಯ ಗುದಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ।

**ಸೂತ್ರಾರ್ಥ** – ಸ್ತ್ರೀಲಿಂಗವಲ್ಲದ ಗುದಶಬ್ದವು ಅಂತೋದಾತ್ತವಾಗುತ್ತದೆ. ಗುದಶಬ್ದವು ಕೋಶದಲ್ಲಿ ಹೀಗಿದೆ. **"ಗುದಂ ತ್ವಪಾನಂ ಪಾಯುರ್ನಾ ವಸ್ತಿನಾಭೇರಧೋ ದ್ವಯೋಃ"** (ಅ.ಕೋ) ಎಂದು ಅಮರದಲ್ಲಿ ಹೇಳಿದಂತೆ ಗುದಶಬ್ದವು ಹಾಗೂ ಅಪಾನಶಬ್ದವು ನಪುಂಸಕ ವಾಗಿದ್ದು **ಪಾಯುಃ** ಎಂಬುದು ಪುಲ್ಲಿಂಗವಾಗಿದೆ. ಆದುದರಿಂದ **ಗುದಮ್, ಅಪಾನಮ್** ಎಂಬುದಾಗಿ ಅಂತ್ಯೋದಾತ್ತವಾಗುತ್ತದೆ.

**ಪಾಯುಃ** ಇದೂ ಅಂತ್ಯೋದಾತ್ತವಾಗಿದೆ. ಆದರೆ ಸ್ತ್ರೀಲಿಂಗವಾದ ಗುದಾ ಎಂಬ ಶಬ್ದವು ಆದ್ಯುದಾತ್ತವಾಗಿದೆ.

* * *

**ಸೂತ್ರ ೫ : ಧ್ಯಪೂರ್ವಸ್ಯ ಸ್ತ್ರೀವಿಷಯಸ್ಯ (೧.೫)**

**ಸೂತ್ರಾರ್ಥ–** ಧಕಾರ ಅಥವಾ ಯಕಾರವನ್ನು ಹಿಂದೆ ಹೊಂದಿರುವ ಅಂತಿಮ ಸ್ವರಾಕ್ಷರದಿಂದ ಕೂಡಿದ ನಿತ್ಯಸ್ತ್ರೀಲಿಂಗದಲ್ಲಿವಾಗಿರುವ ಪ್ರಾತಿಪದಿಕಶಬ್ದಗಳು ಅಂತ್ಯೋದಾತ್ತವಾಗುತ್ತವೆ. ಸ್ತ್ರೀವಿಷಯಸ್ಯ ಎಂದು ಹೇಳಿರುವುದರಿಂದ ನಿತ್ಯಸ್ತ್ರೀಲಿಂಗವಾಗಿರುವ ಎಂದು ತಿಳಿಯಬೇಕು. ಉದಾ –

**ಅಂತರ್ಧಾ । ಛಾಯಾ । ಮಾಯಾ । ಜಾಯಾ** ನಿತ್ಯಸ್ತ್ರೀಲಿಂಗಶಬ್ದಗಳ ಎಂದಿರುವುದರಿಂದ ನಿತ್ಯಸ್ತ್ರೀಲಿಂಗಗಳಲ್ಲದ ಸ್ತ್ರೀಲಿಂಗಶಬ್ದಗಳಾದ **ಇಭ್ಯಾ, ಕ್ಷತ್ರಿಯಾ** ಶಬ್ದಗಳು ಅಂತ್ಯೋದಾತ್ತವಾಗಿಲ್ಲ.

* * *

**ಸೂತ್ರ ೬ : ಖಾಂತಸ್ಯ ಅಶ್ಮಾದೇಃ ( ೧.೬)**

ಶಕಾರ ಅಥವಾ ಮಕಾರವನ್ನು ಆದಿಯಲ್ಲಿ ಹೊಂದಿರದ ಖಕಾರಾಂತವಾದ ಪ್ರಾತಿಪದಿಕವು ಅಂತೋದಾತ್ತವಾಗುತ್ತದೆ. ಉದಾ–

**ನಖಮ್ । ನಖಃ । ಸುಖಮ್ । ದುಃಖಮ್** ಇತ್ಯಾದಿ.

**ಅಶ್ಮಾದೇಃ** ಎಂದುದರಿಂದ **ಶಿಖಾ, ಮುಖಮ್** ಎಂಬಲ್ಲಿ ಅಂತೋದಾತ್ತತ್ವವಿಲ್ಲ.

* * *

**ಸೂತ್ರ ೭ : ಹಿಷ್ಠ–ವತ್ಸರ–ತಿ–ಶತ್–ಥಾಂತಾನಾಮ್ (೧.೭)**

**ಸೂತ್ರಾರ್ಥ –** ಹಿಷ್ಠ, ವತ್ಸರ, ತಿ, ಶತ್ ಹಾಗೂ ಥ ಶಬ್ದಾಂತವಾದ ಪ್ರಾತಿಪದಿಕಗಳು ಅಂತೋದಾತ್ತವಾಗುತ್ತವೆ. ಉದಾ –

**ಬಂಹಿಷ್ಠಮ್ । ಪರಿವತ್ಸರಃ । ಅಶೀತಿಃ । ಸಪ್ತತಿಃ । ಪಂಚಾಶತ್ । ಪ್ರಭೃಥಃ ॥**

* * *

**ಸೂತ್ರ ೮ : ದಕ್ಷಿಣಸ್ಯ ಸಾಧೌ (೧.೮)**

**ಸೂತ್ರಾರ್ಥ** – ಪ್ರಾವೀಣ್ಯಾರ್ಥದಲ್ಲಿರುವ ದಕ್ಷಿಣಶಬ್ದವು ಅಂತೋದಾತ್ತವಾಗುತ್ತದೆ. ಉದಾ –

**ಪ್ರವೀಣಾಯಾಂ ದಕ್ಷಿಣಃ**

ಎಂಬಲ್ಲಿ ಪ್ರವೀಣ ಎಂಬರ್ಥದಲ್ಲಿರುವುದರಿಂದ ದಕ್ಷಿಣಶಬ್ದವು ಅಂತ್ಯೋದಾತ್ತವಾಗಿದೆ. ಸೂತ್ರದಲ್ಲಿಸಾಧುಶಬ್ದವು ಪ್ರಾವಿಣ್ಯಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಪ್ರಾವೀಣ್ಯಎಂಬರ್ಥವಾಚಕವಾದ ದಕ್ಷಿಣ ಎಂಬ ಪ್ರಾತಿಪದಿಕವು ಅಂತ್ಯೋದಾತ್ತವಾಗುತ್ತದೆ. ಸಾಧ್ವರ್ಥದಲ್ಲಿ ಎಂದುದರಿಂದ ಅನ್ಯಾರ್ಥದಲ್ಲಿ ಆದ್ಯುದಾತ್ತವಾಗುತ್ತದೆ. (೧.೭)

* * *

**ಸೂತ್ರ ೯ : ಸ್ವಾಂಗಾಖ್ಯಾಯಾಮ್ ಆದಿರ್ವಾ (೧.೯)**

ದಕ್ಷಿಣಸ್ಯ ಎಂಬುದು ಪೂರ್ವಸೂತ್ರದಿಂದ ಇಲ್ಲಿಯೂ ಅನ್ವಯಿಸುತ್ತದೆ.

**ಸೂತ್ರಾರ್ಥ** – ಸ್ವಾಂಗವು ವಾಚ್ಯವಾಗುತ್ತಿರುವಾಗ ದಕ್ಷಿಣ ಎಂಬ ಪ್ರಾತಿಪದಿಕಕ್ಕೆ ವಿಕಲ್ಪವಾಗಿ ಆದ್ಯುದಾತ್ತತ್ವವು ಬರುವುದು. ಸ್ವಾಂಗವೆಂದರೇನೆಂದು ಕಾಶಿಕಾದಲ್ಲಿ ಹೀಗೆ ಹೇಳಲ್ಪಟ್ಟಿದೆ–

**ಅದ್ರವಂ ಮೂರ್ತಿಮತ್ ಸ್ವಾಂಗಂ ಪ್ರಾಣಿಸ್ಥಮ್ ಅವಿಕಾರಜಮ್ ।**
**ಅತತ್ಸ್ಥಂ ತತ್ರ ದೃಷ್ಟಂ ಚ ತಸ್ಯಚೇತ್ ತತ್ ತಥಾಯುತಮ್ ॥**

ಸ್ವಾಂಗಶಬ್ದಾರ್ಥಕಾರಿಕಾನುಸಾರ–

**ಅದ್ರವಮ್** – ದ್ರವವಲ್ಲದ ವಸ್ತು ಸ್ವಾಂಗ. ನೀರೇ ಮೊದಲಾದವು ಸ್ವಾಂಗವಾಗುವುದಿಲ್ಲ ದ್ರವತ್ವವಿರುವುದರಿಂದ.

**ಮೂರ್ತಿಮತ್**– ದೃಶ್ಯಗೋಚರವಾದ ವಸ್ತು. ಜ್ಞಾನವು ದೃಶ್ಯಗೋಚರವಾಗದಿರುವುದರಿಂದ ಅದು ಸ್ವಾಂಗವಲ್ಲ.

**ಪ್ರಾಣಿಸ್ಥಮ್** – ಪ್ರಾಣಿಗಳಲ್ಲಿರುವ ವಸ್ತು ಕೇಶ, ಮುಖ, ಕರವೇ ಮೊದಲಾದವುಗಳು.

**ಅವಿಕಾರಜಮ್** – ವಿಕಾರಜವಲ್ಲದ ವಸ್ತು ಸ್ವಾಂಗ.

–ಹೀಗೆ ಸ್ವಾಂಗವಾಚಿಯಾದ ಪದದ ಆದಿವರ್ಣವು ವಿಕಲ್ಪವಾಗಿ ಉದಾತ್ತವಾಗುತ್ತದೆ. ಉದಾ–

**ದಕ್ಷಿಣೋ ಬಾಹುಃ ॥**

ಈ ಸೂತ್ರದಿಂದ ಆದ್ಯುದಾತ್ತವು ಅಲ್ಲದಿದ್ದರೆ ಫಿಷೋऽಂತ ಉದಾತ್ತ ಎಂದು ಅಂತ್ಯೋದಾತ್ತ. ಬಾಹು ಸ್ವಾಂಗವಾಗಿರುವುದರಿಂದ ಅದಕ್ಕೆ ವಿಶೇಷಣವಾದ ದಕ್ಷಿಣಶಬ್ದವು ವಿಕಲ್ಪವಾಗಿ ಆದ್ಯುದಾತ್ತವಾಗುತ್ತದೆ. ಇಲ್ಲದಿದ್ದರೆ **ಫಿಷೋऽಂತ ಉದಾತ್ತಃ** ಎಂದು ಅಂತೋದಾತ್ತ.

**ದಕ್ಷಿಣೋ ಬಾಹುಃ** ಎಂದು ರೂಪ. ಸೂತ್ರದಲ್ಲಿ ಸ್ವಾಂಗಶಬ್ದವನ್ನುಪಯೋಗಿಸಿರುವುದರಿಂದ **ವೀಣಾಯಾಂ ದಕ್ಷಿಣಃ** ಎಂಬಲ್ಲಿ ಅಂತೋದಾತ್ತವು ಮಾತ್ರ.

* * *

**ಸೂತ್ರ ೧೦ : ಛಂದಸಿ ಚ (೧.೧೦)**

ವೇದವಿಷಯವು ತೋರುವಾಗ ದಕ್ಷಿಣ ಎಂಬ ಪ್ರಾತಿಪದಿಕವು ವಿಕಲ್ಪವಾಗಿ ಆದ್ಯುದಾತ್ತವಾಗುತ್ತದೆ. ಉದಾ – **ದಕ್ಷಿಣಃ** । ಇಲ್ಲದಿದ್ದರೆ **"ಫಿಷೋऽಂತ ಉದಾತ್ತಃ"** ಎಂಬುದಾಗಿ ಅಂತ್ಯೋದಾತ್ತ – **"ದಕ್ಷಿಣಃ"** ॥

* * *

**ಸೂತ್ರ ೧೧ : ಕೃಷ್ಣಸ್ಯಾऽಮೃಗಾಖ್ಯಾ ಚೇತ್ (೧.೧೧)**

ಛಂದಸಿ, ಅಂತೋದಾತ್ತ ಶಬ್ದಗಳು ಅನುವೃತ್ತಿಗೊಳ್ಳುತ್ತವೆ.

**ಸೂತ್ರಾರ್ಥಃ** – ಮೃಗಾರ್ಥೇ ಅಗಮ್ಯಮಾನೇ ವೇದವಿಷಯೇ ಕೃಷ್ಣಸ್ಯ ಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ ॥

**ಸೂತ್ರಾರ್ಥ** – ಮೃಗವೆಂಬರ್ಥವು ತೋರದಿರುವಾಗ ವೇದವಿಷಯವು ತೋರಿ ಬರುವಾಗ ಕೃಷ್ಣ ಎಂಬ ಪ್ರಾತಿಪದಿಕವು ಅಂತೋದಾತ್ತವಾಗುತ್ತದೆ. ಉದಾ–

**ಕೃಷ್ಣಾನಾಂ" ವ್ರೀಹೀಣಾಮ್** ।

ವ್ರೀಹಿಗೆ ವಿಶೇಷಣ ಕೃಷ್ಣಶಬ್ದವಾಗಿರುವುದರಿಂದ ಕೃಷ್ಣಶಬ್ದವು ಅಂತೋದಾತ್ತವಾಗಿದೆ. ವೇದದಲ್ಲಿನ ಉದಾಹರಣೆ –

**ಕೃಷ್ಣೋ ನೋನಾವ ವೃಷಭೋ ಯದೀದಮ್** (ಋ. ೧.೭೯.೨ )

ಪ್ರತ್ಯುದಾಹರಣೆ – "ಕೃಷ್ಣೋ ರಾತ್ರ್ಯಾ" ಇಲ್ಲಿ ಕೃಷ್ಣಃ ಎಂಬುವುದು ಮೃಗಕ್ಕೆ ವಿಶೇಷಣವಾಗಿರುವುದರಿಂದ "ವರ್ಣಾನಾಂ ತಣತಿನಿತಾಂತಃ" (ಫಿ.ಸೂ.೨.೧೦) ಸೂತ್ರದಿಂದ ಆದ್ಯುದಾತ್ತ.

* * *

**ಸೂತ್ರ ೧೨ : ವಾ ನಾಮಧೇಯಸ್ಯ (೧.೨)**

ಛಂದಸಿ ಹಾಗೂ ಕೃಷ್ಣಸ್ಯ ಎಂಬ ಪದಗಳು ಅನುವೃತ್ತಿಯಾಗಿವೆ.

**ಸೂತ್ರಾರ್ಥಃ** – ವೇದವಿಷಯೇ ನಾಮಧೇಯಸ್ಯ ಕೃಷ್ಣಸ್ಯ ಪ್ರಾತಿಪದಿಕಸ್ಯ ಅಂತ ಉದಾತ್ತೋ ವಾ ಭವತಿ ।

**ಸೂತ್ರಾರ್ಥ** – ವೇದವಿಷಯದಲ್ಲಾಗುವಾಗ ಕೃಷ್ಣ ಎಂಬ ಪ್ರಾತಿಪದಿಕವು ವಿಕಲ್ಪವಾಗಿ ಅಂತೋದಾತ್ತವಾಗುತ್ತದೆ. ಪಕ್ಷದಲ್ಲಿ ಆದ್ಯುದಾತ್ತ.

**೧ ಕೃಷ್ಣ ಋಷಿಃ / ೨ ಕೃಷ್ಣ ಋಷಿಃ** ॥

* * *

**ಸೂತ್ರ ೧೩ : ಶುಕ್ಲಗೌರಯೋರಾದಿಃ (೧.೧೩)**

ಶುಕ್ಲಗೌರಯೋಃ ಪ್ರಾತಿಪದಿಕಯೋಃ ಆದ್ಯುದಾತ್ತಃ ಸ್ಯಾತ್ ॥

**ಸೂತ್ರಾರ್ಥ** – ಶುಕ್ಲ ಮತ್ತು ಗೌರ ಎಂಬ ಪ್ರಾತಿಪದಿಕಗಳು ಆದ್ಯುದಾತ್ತವಾಗುತ್ತವೆ.

**ಶುಕ್ಲಃ । ಗೌರಃ ।**

ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯದಂತೆ "ನಾಮಧೇಯ"ಶಬ್ದವು ಇಲ್ಲಿ ಪೂರ್ವಸೂತ್ರದಿಂದ (ವಾ ನಾಮಧೇಯಸ್ಯ) ಅನುವೃತ್ತಿಯನ್ನು ಹೊಂದುತ್ತದೆ. ಅವರ ಪ್ರಕಾರ ನಾಮಧೇಯಶಬ್ದಗಳಾದ ಶುಕ್ಲಗೌರಶಬ್ದಗಳು ಆದ್ಯುದಾತ್ತವಾಗುತ್ತವೆ. ಅನ್ಯತ್ರ ಅಂತ್ಯೋದಾತ್ತವಾಗುತ್ತವೆ. ಉದಾ–

**"ಗೌರೋ"** ಯಥಾ ಪಿಬ.

ಆಚಾರ್ಯ ಭಟ್ಟೋಜಿ ದೀಕ್ಷಿತರು ವಾ ಎಂಬುವುದನ್ನು ಅನುವೃತ್ತಿಯೆಂದು ತಿಳಿಯುತ್ತಾರೆ. ಹಾಗಾದಾಗ ಎರಡೂ ಸ್ವರಗಳನ್ನೂ ಈ ಪದಗಳು ಹೊಂದುತ್ತವೆ.

**ಶುಕ್ಲಃ । ಶುಕ್ಲಃ । ಗೌರಃ । ಗೌರಃ ॥**

**ಸೂತ್ರ ೧೪ : ಅಂಗುಷ್ಠೋದಕಬಕವಶಾನಾಂ ಛಂದಸ್ಯಂತಃ (೧.೧೪)**

**ಸೂತ್ರಾರ್ಥಃ** – ಛಂದಸಿ ವಿಷಯೇ ಅಂಗುಷ್ಠೋದಕಬಕವಶಾನಾಂ ಪ್ರಾತಿಪದಿಕಾನಾಮ್ ಅಂತ ಉದಾತ್ತೋ ಭವತಿ ।

**ಅರ್ಥ** – ವೇದವಿಷಯವು ತೋರಿ ಬರುವಾಗ ಅಂಗುಷ್ಠ ಉದಕ ಬಕ ಹಾಗೂ ವಶಾ ಶಬ್ದಗಳು ಅಂತೋದಾತ್ತವಾಗುತ್ತವೆ. ಉದಾ–

**ಅಂಗುಷ್ಠಃ । ಉದಕಮ್ । ಬಕಃ । ವಶಾ ॥**

* * *

**ಸೂತ್ರ ೧೫ : ಪೃಷ್ಠಸ್ಯ ಚ (೧.೧೫ )**

**ಸೂತ್ರಾರ್ಥಃ** – ಛಂದಸಿ ವಿಷಯೇ ಪೃಷ್ಠ – ಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ ।

**ಸೂತ್ರಾರ್ಥ** – ಛಂದೋವಿಷಯವು ತೋರಿಬರುವಾಗ "ಪೃಷ್ಠ" ಎಂಬ ಪ್ರಾತಿಪದಿಕವು ಅಂತೋದಾತ್ತವಾಗುತ್ತದೆ.

**"ಪೃಷ್ಠಂ" ಯಜ್ಞೇನ ಕಲ್ಪತಾಮ್ ।**

ಛಂದಸಿ ಎಂದುದರಿಂದ ವೇದದಲ್ಲಿ ಮಾತ್ರ ಅಂತೋದಾತ್ತತ್ವ. ಲೋಕದಲ್ಲಿ "ಸ್ವಾಂಗಶಿಟಾಮ್ ಅದಂತಾನಾಮ್"ಎಂಬ ಸೂತ್ರದಿಂದ ಆದ್ಯುದಾತ್ತತ್ವ. "ಪೃಷ್ಠಮ್" ಎಂದು ರೂಪ.

**ಸೂತ್ರ ೧೬ : ಅರ್ಜುನಸ್ಯ ತೃಣಾಖ್ಯಾ ಚೇತ್ ( ೧.೬)**

**ಸೂತ್ರಾರ್ಥಃ** – ತೃಣಾರ್ಥೇ ಗಮ್ಯಮಾನೇ ಅರ್ಜುನಸ್ಯ ಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ.

**ಸೂತ್ರಾರ್ಥ** – ತೃಣಾರ್ಥವು ತೋರಿಬಂದಾಗ "ಅರ್ಜುನ" ಎಂಬ ಪ್ರಾತಿಪದಿಕಕ್ಕೆ ಅಂತೋದಾತ್ತತ್ವವು ಹೇಳಲ್ಪಡಬೇಕು. ಉದಾ –

**ಅರ್ಜುನಂ ತೃಣಮ್**

ತೃಣಾರ್ಥವು ತೋರಿ ಬರದಿರುವಾಗ ಆದ್ಯುದಾತ್ತತ್ವ. ಉದಾ –

**ಅರ್ಜುನೋ ವೃಕ್ಷಃ ॥**

**ತೃಣಾಖ್ಯಾ ಇತಿ ಕಿಮ್? ಅರ್ಜುನೋ ವೃಕ್ಷಃ । ಅತ್ರ ತು ವೃಕ್ಷನಾಮತ್ವಾತ್ "ಉನರ್ವರ್ನ್ನಂತಾನಾಮ್" ಇತ್ಯಾದ್ಯುದಾತ್ತತ್ವಮ್ । "ಅರ್ಜುನೋ" ವೃಕ್ಷಃ ।**

ಇಲ್ಲಿ ವೃಕ್ಷದ ಹೆಸರು ಆಗಿರುವುದರಿಂದ ಉನಪ್ರತ್ಯಯಾಂತ, ಋಕಾರಾಂತ ಹಾಗೂ ವನ್ ಪ್ರತ್ಯಯಾಂತ ಪ್ರಾತಿಪದಿಕಗಳಿಗೆ ಆದ್ಯುದಾತತ್ವವು ಬರುತ್ತದೆ ಎಂಬ ಸೂತ್ರದಿಂದ "ಉನ" ಪ್ರತ್ಯಯಾಂತವಾಗಿರುವ "ಅರ್ಜುನ" ಶಬ್ದವು ಆದ್ಯುದಾತ್ತವಾಗುತ್ತದೆ.

ಶೇಷನಿಘಾತ **"ಅರ್ಜುನಃ"** ಎಂದು ಸ್ವರನಿಷ್ಪತ್ತಿ.

* * *

**ಸೂತ್ರ ೧೭ : ಅರ್ಯಸ್ಯ ಸ್ವಾಮ್ಯಾಖ್ಯಾ ಚೇತ್ (೧.೧೭)**

**ಸೂತ್ರಾರ್ಥಃ –** ಸ್ವಾಮ್ಯರ್ಥೇ ಗಮ್ಯಮಾನೇ ಅರ್ಯಸ್ಯ ಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ ।

**ಸೂತ್ರಾರ್ಥ–** "ಅರ್ಯ"ಶಬ್ದಕ್ಕೆ ಸ್ವಾಮಿ ಎಂಬ ಅರ್ಥವು ತೋರಿ ಬರುವಾಗ ಅಂತೋದಾತ್ತತ್ವವು ಬರುತ್ತದೆ.

**ಅರ್ಯಃ ಸ್ವಾಮೀ । ಅನ್ಯತ್ರ ಅರ್ಯಃ ।** ತತ್ರ ವೈಶ್ಯಾರ್ಥಃ । "ಅರ್ಯಃ ಸ್ವಾಮಿವೈಶ್ಯಯೋಃ" (ಪಾ.ಸೂ೩.೧.೧೦೩) ॥ "ಯತೋऽನಾವಃ" (೬.೧.೨೦೭)

ಈ ಸೂತ್ರದಿಂದ ಆದ್ಯುದಾತ್ತತ್ವ ವಿಹಿತವಾಗಿತ್ತು. ಈ ಸೂತ್ರವು ಆದ್ಯುದಾತ್ತತ್ವವನ್ನು ಬಾಧಿಸಿ ಅಂತೋದಾತ್ತತ್ವವನ್ನು ವಿಧಿಸಿದೆ.

* * *

**ಸೂತ್ರ ೧೮ : ಆಶಾಯಾ ಅದಿಗಾಖ್ಯಾ ಚೇತ್ ( ೧.೧೮)**

**ಸೂತ್ರಾರ್ಥಃ –** ಆಶಾಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ ದಿಗಾಖ್ಯಾ ಚೇನ್ನ ಭವತಿ ॥

**ಆಶಾ** ॥ ದಿಗರ್ಥೇ ತು **ಆಶಾ** ಇತ್ಯಾದ್ಯುದಾತ್ತತ್ವಮ್ ॥ ಆಶಾ ಇತಿ ಅನೇಕಾರ್ಥಃ ಶಬ್ದಃ ॥ ದಿಗರ್ಥೇ ನೇತಿ ಚೇತ್ ಅನ್ಯಾರ್ಥೇಷು ಅಂತೋದಾತ್ತತ್ವಮಿತ್ಯುಕ್ತಂ ಸ್ಯಾತ್ ॥ ತಥಾ ಚ ದಿಗರ್ಥೇ (ಏವ?) **ಆಶಾ** ಇತ್ಯಾದ್ಯುದಾತ್ತತ್ವಮಿತ್ಯರ್ಥೋ ಜ್ಞಾತಃ ಸ್ಯಾತ್ ॥

* * *

## ಸೂತ್ರ ೧೯ : ನಕ್ಷತ್ರಾಣಾಮಾಬ್ವಿಷಯಾಣಾಮ್ (೧.೧೯)

**ಸೂತ್ರಾರ್ಥಃ** – ಆಪ್–ವಿಷಯಾಣಾಂ ನಕ್ಷತ್ರವಾಚಿನಾಂ ಪ್ರಾತಿಪದಿಕಾನಾಮ್ಅಂತ ಉದಾತ್ತೋ ಭವತಿ ।

**ಸೂತ್ರಾರ್ಥ**– ಆಪ್ ಶಬ್ದದಿಂದ ಟಾಪ್,ಡಾಪ್,ಚಾಪ್ ಈ ಸ್ತ್ರೀಪ್ರತ್ಯಯಗಳನ್ನು ತೆಗೆದುಕೊಳ್ಳಬೇಕು. ಆಪ್ ಪ್ರತ್ಯಯಾಂತವಾದ ನಕ್ಷತ್ರವಾಚಿ ಪ್ರಾತಿಪದಿಕಗಳು ಅಂತೋದಾತ್ತವನ್ನು ಹೊಂದುತ್ತವೆ.

**ಆಶ್ಲೇಷಾ** । **ಅನೂರಾಧಾ** । **ಶ್ರವಿಷ್ಠಾ** । **ಧನಿಷ್ಠಾ** । **ಜ್ಯೇಷ್ಠಾ** ।

ನಕ್ಷತ್ರವಾಚೀತಿ ಕಿಮ್? **ಖಟ್ವಾ** । ನಕ್ಷತ್ರವಾಚಿತ್ವಾಭಾವಾತ್ ಆಬಂತತ್ವೇಽಪಿ ಆದ್ಯುದಾತ್ತತ್ವಮ್ । ಆಬ್ವಿಷಯಾಣಾಮಿತಿ ಕಿಮ್? **ಅಶ್ವಿನೀ** । ಆಬಂತತ್ವಾಭಾವಾತ್ ಆದ್ಯುದಾತ್ತತ್ವಮ್ ॥

* * *

## ಸೂತ್ರ ೨೦ :ನ ಕುಪೂರ್ವಸ್ಯ ಕೃತ್ತಿಕಾಖ್ಯಾ ಚೇತ್ (೧.೨೦)

**ಸೂತ್ರಾರ್ಥಃ** – ಕೃತ್ತಿಕಾರ್ಥೇ ವರ್ತಮಾನಸ್ಯ ಆಬ್ ವಿಷಯಸ್ಯ ನಕ್ಷತ್ರವಾಚಿನಃ ಕವರ್ಗಪೂರ್ವಸ್ಯ ಪ್ರಾತಿಪದಿಕಸ್ಯ ಅಂತ ಉದಾತ್ತೋ ನ ಭವತಿ ।

**ಸೂತ್ರಾರ್ಥ**– ಕೃತ್ತಿಕಾ ನಕ್ಷತ್ರವಾಚಿಯಾದ ಆಬಂತವಾದ ನಕ್ಷತ್ರವಾಚಿಯಾದ ಕವರ್ಗದ ವರ್ಣವನ್ನು ಹಿಂದೆ ಹೊಂದಿರುವ ಪ್ರಾತಿಪದಿಕವು ಅಂತೋದಾತ್ತವಾಗುವುದಿಲ್ಲ. (ಆದ್ಯುದಾತ್ತವಾಗುತ್ತದೆ) ಉದಾ–

**ಕೃತ್ತಿಕಾ** । **ಆರ್ಯಿಕಾ** । **ಬಹುಲಿಕಾ** ॥

ಅತ್ರ ಉದಾಹರಣತ್ವೇನ ದತ್ತಾನಿ ಸರ್ವಾಣಿ ಆಬಂತಾನಿ ಕಪೂರ್ವಾಣಿ ಚ

ಕೃತ್ತಿಕಾನಕ್ಷತ್ರಪರ್ಯಾಯಾಣಿ ಚ । ತಸ್ಮಾದತ್ರ ಅಂತೋದಾತ್ತತ್ವಂ ನ ಪ್ರವೃತ್ತಮ್ ।

**ಬಹುಲಾ** । ಅತ್ರ ಆಬ್ವಿಷಯಕೇ ಕೃತ್ತಿಕಾನಕ್ಷತ್ರವಾಚಿತ್ವೇಽಪಿ ಚ ಕುಪೂರ್ವತ್ವಂ ನಾಸ್ತೀತ್ಯೇವ ಅಂತೋದಾತ್ತತ್ವಮ್ ॥ ಅನ್ಯತ್ರ ಅಂತೋದಾತ್ತತ್ವಮ್ । **ಕೃತ್ತಿಕಾ** । ಕೃತ್ತಿಕಾಸು ಜಾತಾ ಮಾಣವಿಕೇತ್ಯರ್ಥಃ ॥ ನಾಮಪದಮಿದಮ್ ।

* * *

**ಸೂತ್ರ ೨೧ : ಘೃತಾದೀನಾಂ ಚ (೧.೨೧)**

**ಸೂತ್ರಾರ್ಥ:** – ಘೃತಾದಿಗಣಪಠಿತಾನಾಂ ಪ್ರಾತಿಪದಿಕಾನಾಮ್ ಅಂತ ಉದಾತ್ತೋ ಭವತಿ ॥

ಸೂತ್ರಾರ್ಥ – ಘೃತಾದಿಗಣಪಠಿತವಾದ ಶಬ್ದಗಳು ಅಂತೋದಾತ್ತವಾಗುತ್ತವೆ, ಉದಾ–

**ಘೃತಂ ಮಿಮಿಕ್ಷೇ** । ಘೃತಾದಿ ಗಣವು ಒಂದು ಆಕೃತಿಗಣವಾಗಿದೆ.

* * *

**ಸೂತ್ರ ೨೨ : ಜ್ಯೇಷ್ಠಕನಿಷ್ಠಯೋರ್ವಯಸಿ (೧.೨೨)**

**ಸೂತ್ರಾರ್ಥ:** – ವಯೋಽರ್ಥೇ ವರ್ತಮಾನಯೋಃ ಜ್ಯೇಷ್ಠಕನಿಷ್ಠಯೋಃ ಪ್ರಾತಿಪದಿಕಯೋಃ ಅಂತ ಉದಾತ್ತೋ ಭವತಿ ॥

**ಸೂತ್ರಾರ್ಥ:** – ವಯೋಽರ್ಥವು ತೋರಿ ಬರುವಾಗ ಜ್ಯೇಷ್ಠ ಹಾಗೂ ಕನಿಷ್ಠ ಶಬ್ದಗಳು ಅಂತೋದಾತ್ತವಾಗುತ್ತವೆ. ಉದಾ–

**ಜ್ಯೇಷ್ಠ ಆಹ ಚಮಸಾ** (ಋಕ್) । **ಕನಿಷ್ಠ ಆಹ ಚತುರಃ** (ಋಕ್)

ಇಲ್ಲಿ ಜ್ಯೇಷ್ಠ ಹಾಗೂ ಕನಿಷ್ಠ ಶಬ್ದಗಳು ಇಷ್ಠನ್ ಪ್ರತ್ಯಯಾಂತದವುಗಳು. ನಕಾರ ಲೋಪವಾಗಿದೆ. ಆದುದರಿಂದ **"ಞ್ನಿತ್ಯಾದಿರ್ನಿತ್ಯಮ್"** ಎಂಬ ಸೂತ್ರದಿಂದ ಆದ್ಯುದಾತ್ತಪ್ರಾಪ್ತವಾಗಿತ್ತು. ಪ್ರಕೃತ ಈ ಸೂತ್ರವು ಅಂತೋದಾತ್ತವನ್ನು ವಿಧಿಸುತ್ತದೆ. ವಯಸಿ ಇತಿ ಕಿಮ್? **ಜ್ಯೇಷ್ಠಃ** ಇಲ್ಲಿ ಶ್ರೇಷ್ಠ ಎಂಬರ್ಥ

ದಲ್ಲಿರುವುದರಿಂದ ಪೂರ್ವೋಕ್ತ ಸೂತ್ರದಿಂದ ಆದ್ಯುದಾತ್ತ ಬಂದಿದೆ. ಹಾಗೆಯೇ ಕನಿಷ್ಠಃ ಎಂಬಲ್ಲೂ ಅಲ್ಪಿಷ್ಠವೆಂಬ ಅರ್ಥವು ಕಂಡು ಬರುವುದರಿಂದ ಹಿಂದಿನಂತೆ ಆದ್ಯುದಾತ್ತ ಬಂದಿದೆ.

* * *

**ಸೂತ್ರ ೨೩ : ಬಿಲ್ವತಿಷ್ಯಯೋಃ ಸ್ವರಿತೋ ವಾ (೧.೨೨)**

**ಸೂತ್ರಾರ್ಥಃ –** ಬಿಲ್ವತಿಷ್ಯಯೋಃ ಪ್ರಾತಿಪದಿಕಯೋಃ ಅಂತಸ್ವರಿತತ್ವಂ ವಾ ಭವತಿ । ಪಕ್ಷೇ ಅಂತ ಉದಾತ್ತತ್ವಮ್ ।

**ಸೂತ್ರಾರ್ಥ –** ಬಿಲ್ವ ಹಾಗೂ ತಿಷ್ಯ ಎಂಬ ಶಬ್ದಗಳಿಗೆ ಅಂತ್ಯಸ್ವರವು ವಿಕಲ್ಪವಾಗಿ ಬರುತ್ತದೆ.

ಸ್ವರಿತ ಬಂದರೆ ಬಿಲ್ವಃ । ಬಾರದಿದ್ದರೆ ಬಿಲ್ವಃ ॥ ತಿಷ್ಯಃ । ತಿಷ್ಯಃ । ಹೀಗೆರಡು ರೂಪ.

॥ ಹರಿಃಓಂ । ಹರಿಃಓಂ ತತ್ ಸತ್ ॥

॥ ಶ್ರೀಕೃಷ್ಣಾರ್ಪಣಮಸ್ತು ॥

* * *

## ಅಥ ದ್ವಿತೀಯಃ ಪಾದಃ

**ಸೂತ್ರ ೨೪ : ಅಥಾದಿಃ ಪ್ರಾಕ್ ಶಕಟೇಃ (೨.೧)**

**ಸೂತ್ರಾರ್ಥಃ –** ಅಧಿಕಾರೋಽಯಮ್ "ಶಕಟಿಶಕಟ್ಯೋರಕ್ಷ" (ಫಿ.೪.೧) ಇತ್ಯಸ್ಮಾತ್ ಪ್ರಾಕ್ । ಫಿಟ್ (೪.೧) ಸೂತ್ರಾತ್ ಪ್ರಾಕ್ ಪ್ರಾತಿಪದಿಕಸ್ಯ ಆದಿಃ ಉದಾತ್ತಃ ಇತಿ ವೇದಿತವ್ಯಃ ।

**ಸೂತ್ರಾರ್ಥ –** ಆದ್ಯುದಾತ್ತ ವಿಧಾಯಕ ಅಧಿಕಾರಸೂತ್ರವಿದು. ಇದರ ವ್ಯಾಪ್ತಿ "ಶಕಟಿಶಕಟ್ಯೋಃ ಅಕ್ಷರಮಕ್ಷರಂ ಪರ್ಯಾಯೇಣ" ಎಂಬ ಸೂತ್ರದವರೆಗೆ.

**ವಿವರಣೆ –** ಶಕಟಿಶಕಟಿ ಎಂಬ ಪ್ರಾತಿಪದಿಕಗಳ ಪ್ರತ್ಯೇಕ ಅಕ್ಷರಗಳು ಪರ್ಯಾಯಕ್ರಮದಿಂದ ಉದಾತ್ತವಾಗುತ್ತವೆ. ಅಂದರೆ ಶಕಟಿ ಹಾಗೂ ಶಕಟೀ ಎಂಬ ಶಬ್ದಗಳಲ್ಲಿ ಇರುವ ಮೂರು ಅಕ್ಷರಗಳೂ ಕ್ರಮಾವಾಗಿ ಉದಾತ್ತವಾಗುತ್ತವೆ. ಅಂದರೆ ಈ ಎರಡೂ ಶಬ್ದಗಳು ಕ್ರಮವಾಗಿ ಆದ್ಯುದಾತ್ತ, ಮಧ್ಯೋದಾತ್ತ ಹಾಗೂ ಅಂತ್ಯೋದಾತ್ತ ವಾಗುತ್ತವೆ. ಉದಾ–

**ಶಕಟಿಃ । ಶಕಟಿಃ । ಶಕಟಿಃ ॥** ಹೀಗೆಯೇ **ಶಕಟೀ । ಶಕಟೀ । ಶಕಟೀ ॥)**

* * *

**ಸೂತ್ರ ೨೫ : ಹ್ರಸ್ವಾಂತಸ್ಯ ಸ್ತ್ರೀವಿಷಯಸ್ಯ (೨.೨)**

**ಸೂತ್ರಾರ್ಥಃ –** ನಿತ್ಯಂ ಸ್ತ್ರೀಲಿಂಗೇ ವರ್ತಮಾನಸ್ಯ ಹ್ರಸ್ವವರ್ಣಾಂತಸ್ಯ ಪ್ರಾತಿಪದಿಕಸ್ಯ ಆದಿಃ ಉದಾತ್ತೋ ಭವತಿ ।

**ಸೂತ್ರಾರ್ಥ –** ನಿತ್ಯವೂ ಹ್ರಸ್ವಸ್ವರಾಂತವಾದ ಸ್ತ್ರೀಲಿಂಗವಾಚಿಯಾದ ಶಬ್ದವು ಆದ್ಯುದಾತ್ತವಾಗುತ್ತದೆ. ಉದಾ–

**ಬಲಿಃ । ತನುಃ ॥**

ನದೀ ಶಬ್ದವು ನಿತ್ಯಸ್ತ್ರೀಲಿಂಗವಾದರೂ ಹ್ರಸ್ವಾಂತವಲ್ಲದಿರುವುದರಿಂದ ಆದ್ಯುದಾತ್ತವಾಗುವುದಿಲ್ಲ. **ಮರುಃ** ಎಂಬುದು ಪುಲ್ಲಿಂಗವಾಗಿರುವುದರಿಂದ ಹ್ರಸ್ವಾಂತವಾದರೂ ಆದ್ಯುದಾತ್ತವಾಗುವುದಿಲ್ಲ. ಹೀಗೆಯೇ **ಲಘುಃ** ಎಂಬುದು

ಸ್ತ್ರೀಲಿಂಗವಲ್ಲದಿರುವುದರಿಂದ ಆದ್ಯುದಾತ್ತವಾಗಲಾರದು. ಬಹುಃ ಎಂಬುದೂ ಆದ್ಯುದಾತ್ತವಾಗಲಾರದು.

* * *

## ಸೂತ್ರ ೨೬ : ನಬ್ವಿಷಯಸ್ಯ ಅನಿಸಂತಸ್ಯ (೨.೩)

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ನಿತ್ಯಂ ನಪುಂಸಕಲಿಂಗೇ ವರ್ತಮಾನಸ್ಯ ಪ್ರಾತಿಪದಿಕಸ್ಯ ಆದಿಃ ಉದಾತ್ತೋ ಭವತಿ, ಇಸಂತಸ್ಯ ತು ನ ಭವತಿ ॥ ನಪ್ ಇತಿ ನಪುಂಸಕಲಿಂಗಸ್ಯ ಸಂಜ್ಞಾ । **"ಅರ್ಚಿಶುಚಿಹುಸೃಪಿಛಾದಿಃ"** (ಉಣಾದಿಃ.೨.೧೧೦) ಎಂಬುವುದಾಗಿ ಉಣಾದಿಸೂತ್ರದಿಂದ 'ಇಸಿ' ಪ್ರತ್ಯಯ ವಿಧಾನ ಮಾಡಲಾಗಿದೆ. ಸಕಾರೋತ್ತರ ಇಕಾರ ಇತ್ ಸಂಜ್ಞೆಯನ್ನು ಹೊಂದುತ್ತದೆ. ಇಸ್ ಮಾತ್ರ ಉಳಿಯುತ್ತದೆ.

**ಸೂತ್ರಾರ್ಥ** – ಯಾವ ಶಬ್ದದ ಅಂತ್ಯದಲ್ಲಿ ಇಸ್ ಪ್ರತ್ಯಯವಿಲ್ಲವೋ ಹಾಗೂ ನಪುಂಸಕಲಿಂಗದಲ್ಲಿದೆಯೋ ಅಂತಹಾ ಪ್ರಾತಿಪದಿಕವು ಆದ್ಯುದಾತ್ತ ವಾಗುತ್ತದೆ. ಹಿಂದಿನ ಸೂತ್ರದಲ್ಲಿ ಹ್ರಸ್ವಾಂತಸ್ಯ ನಬ್ವಿಷಯಸ್ಯ ಎಂಬುದಾಗಿ ವಿಷಯಶಬ್ದದ ಅನುವೃತ್ತಿಯಾಗುತ್ತಿದ್ದರೂ ಪುನಃ ಈ ಸೂತ್ರದಲ್ಲಿ "ನಬ್ವಿಷಯಸ್ಯ" ಎಂಬುದಾಗಿ ಕೊಟ್ಟದ್ದರ ಪ್ರಯೋಜ ನವೇನು? ಎಂದರೆ ನಪುಂಸಕಶಬ್ದವು ಲಿಂಗವ್ಯತ್ಯಾಸವನ್ನು ಹೊಂದಿದರೂ ಕೂಡ ಈ ಸೂತ್ರದಿಂದ ಆದ್ಯುದಾತ್ತವಾಗುತ್ತದೆ ಎಂದರ್ಥ. ಉದಾ–

**ಕಾಮ್ಯಂ ಮಧು । ಮಧು ವಾತಾ ಋತಾಯತೇ । ಮಧೋಃ ॥**

ಸರ್ಪಿಃ ಇಸಂತವಾದುದರಿಂದ ಆದ್ಯುದಾತ್ತವಾಗಿಲ್ಲ.

* * *

## ಸೂತ್ರ ೨೭ : ತೃಣಧಾನ್ಯಾನಾಂ ಚ ದ್ವ್ಯಷಾಮ್ (೨.೪)

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ತೃಣವಾಚಿನಾಂ ಧಾನ್ಯವಾಚಿನಾಂ ಚ ದ್ವ್ಯಚ್ಕಾನಾಂ ಪ್ರಾತಿಪದಿ ಕಾನಾಮ್ ಆದಿಃ ಉದಾತ್ತೋ ಭವತಿ ।

**ಸೂತ್ರಾರ್ಥ** – ಎರಡು ಸ್ವರಾಕ್ಷರಗಳನ್ನು ಹೊಂದಿರುವ ತೃಣವಾಚಿ ಹಾಗೂ ಧಾನ್ಯವಾಚಿಯಾದ ಪ್ರಾತಿಪದಿಕಗಳು ಆದ್ಯುದಾತ್ತವಾಗುತ್ತವೆ. ಉದಾ–

**ಕುಶಃ** । ತೃಣವಾಚಿ ಶಬ್ದವಿದು.

**ಕಾಶಃ** । ತೃಣವಾಚಿಶಬ್ದವಿದು.

**ಮಾಷಃ** । ಧಾನ್ಯವಾಚಿಶಬ್ದವಿದು.

**ತಿಲಃ** । ಧಾನ್ಯವಾಚಿಶಬ್ದವಿದು.

ಅಷ್ ಎಂದರೆ ಅಚ್ ಪ್ರತ್ಯಾಹಾರಕ್ಕೊಂದು ಪ್ರಾಚೀನ ಸಂಜ್ಞೆ.

ದ್ವ್ಯಷಾಮ್ ಇತಿ ಕಿಮ್? **ಗೋಧೂಮಾಃ** । ಧಾನ್ಯವಾಚಿಯಾದರೂ ತ್ರ್ಯಷ್ ಆಗಿರುವುದರಿಂದ ಮಧ್ಯೋದಾತ್ತವಾಗಿದೆ.

* * *

**ಸೂತ್ರ ೨೮ : ನ್ರಃ ಸಙ್ಖ್ಯಾಯಾಃ (೨.೫)**

ಪೂರ್ವವತ್ ಅಧಿಕಾರಸೂತ್ರವಿದು.

**ಸೂತ್ರಾರ್ಥಃ** – ನಕಾರಾಂತಸ್ಯ ರೇಫಾಂತಸ್ಯ ಸಂಖ್ಯಾವಾಚಿನಃ ಪ್ರಾತಿಪದಿಕಸ್ಯ ಆದಿಃ ಉದಾತ್ತೋ ಭವತಿ ।

**ಸೂತ್ರಾರ್ಥ** – ನಕಾರಾಂತ ಹಾಗೂ ರಕಾರಾಂತ ಸಂಖ್ಯಾವಾಚಕಶಬ್ದಗಳು ಆದ್ಯುದಾತ್ತವಾಗುತ್ತವೆ.

ನಕಾರಾಂತ ಸಂಖ್ಯಾವಾಚಕಪದಗಳು – ಪಂಚನ್ । ಸಪ್ತನ್ । ಅಷ್ಟನ್ । ನವನ್ । ದಶನ್ ।

ರೇಫಾಂತಸಂಖ್ಯಾವಾಚಕಶಬ್ದ – ಚತುರ್ ಮಾತ್ರ. ಉದಾ–

**ಪಂಚ । ಸಪ್ತ । ಅಷ್ಟ । ನವ । ದಶ ॥ ಚತ್ವಾರಃ । ಚತುಷ್ಕಪಾಲಃ ॥**

* * *

**ಸೂತ್ರ ೨೯ : ಸ್ವಾಂಗಶಿಟಾಮ್ ಅದಂತಾನಾಮ್ (೨.೬)**

ಅಧಿಕಾರೋಯಮ್ ।

**ಸೂತ್ರಾರ್ಥಃ** – ಶಿಟ್ ಇತಿ ಸರ್ವನಾಮಸಂಜ್ಞಾ । ಸ್ವಾಂಗವಾಚಿನಾವ್ ಅದಂತಾನಾಂ ಸರ್ವನಾಮಸಂಜ್ಞಕಾನಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ಭವತಿ ।

**ಸ್ವಾಂಗಃ** –

**ಅದ್ರವಂ ಮೂರ್ತಿಮತ್ ಸ್ವಾಂಗಂ ಪ್ರಾಣಿಸ್ಥಮ್ ಅವಿಕಾರಜಮ್ ।**
**ಅತತ್ಸ್ಥಂ ತತ್ರ ದೃಷ್ಟಂ ಚ ತಸ್ಯ ಚೇತ್ ತಥಾಯುತಮ್ ॥**

ದ್ರವವಾಗಿರಬಾರದು. ಉದಾ–**ಕಫ, ಸ್ವೇದ** ।

**ಮೂರ್ತಿಮತ್** – ಕಾಣುವಂತಹದ್ದಾಗಿರಬೇಕು. ಜ್ಞಾನ ವಾಗಲಾರದು.

ಪ್ರಾಣಿಗಳಲ್ಲಿರುವಂತಹದ್ದಾಗಿರಬೇಕು – **ಕೇಶಃ** । **ಮುಖಮ್** । **ಕರಃ** । ಇವೇ ಮೊದಲಾದವುಗಳು ಸ್ವಾಂಗಗಳು.

ಅವಿಕಾರಜವಾಗಿರಬೇಕು–

ಪ್ರಾಣಿಗಳಲ್ಲಿ ಇಲ್ಲದ್ದಾಗಿರಬೇಕು. ಆದರೆ ಪ್ರಾಣಿಗಳಲ್ಲಿ ಕಂಡದ್ದಾಗಿರಬೇಕು.

**ಸೂತ್ರಾರ್ಥ** – ಅದಂತವಾದ ಸ್ವಾಂಗವಾಚಿಯಾದ ಹಾಗೂ ಅದಂತವಾದ ಸರ್ವನಾಮಶಬ್ದಗಳು ಅದ್ಯುದಾತ್ತವಾಗುತ್ತವೆ. ಉದಾ–

**ಕರ್ಣೌ** । **ಓಷ್ಠೌ** । **ವಿಶ್ವಃ** (ಸರ್ವನಾಮಶಬ್ದವಾಗಿದೆ) ।

ಸೂತ್ರದಲ್ಲಿ ಸ್ವಾಂಗವಾಚಿಯಾದ ಹಾಗೂ ಸರ್ವನಾಮಸಂಜ್ಞೆ ಹೊಂದಿರುವ ಎಂದು ಹೇಳಿರುವುದರಿಂದ ಅದಂತವಾದ ಶಬ್ದಗಳೆಲ್ಲಾ ಆದ್ಯುದಾತ್ತವಾಗುತ್ತವೆ ಎಂದು ತಿಳಿಯಬಾರದು. ಆದುದರಿಂದ **ಘಟಃ** ಎಂಬುವುದು ಆದ್ಯುದಾತ್ತವಾಗಿಲ್ಲ.

ಹೀಗೆಯೇ ಅದಂತ ಎಂದಿರುವುದರಿಂದ **ಬಾಹೂ ಊರೂ** ಇತ್ಯಾದಿಶಬ್ದಗಳು ಆದ್ಯುದಾತ್ತವಾಗಿಲ್ಲ.

* * *

**ಸೂತ್ರ ೩೦ : ಪ್ರಾಣಿನಾಂ ಕುಪೂರ್ವಮ್ (೨.೭)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥ:** – ಪ್ರಾಣಿವಾಚಿನಾಂ ಪ್ರಾತಿಪದಿಕಾನಾಂ ಕವರ್ಗೀಯವರ್ಣಾತ್ ಪೂರ್ವಂ ಯದ್ ಅಕ್ಷರಂ ತತ್ ಉದಾತ್ತಂ ಭವತಿ । ಕು – ಕವರ್ಗಃ ।

ಉದಾ – **ಖಗಃ । ಕಾಕಃ । ವೃಕಃ । ವಿಹಗಃ । ಶುಕಃ । ಚಟಕಃ ।**

ಈ ಹಿಂದೆ ಹೇಳಿದ ಎಲ್ಲಾ ಉದಾಹರಣೆಗಳು ಪ್ರಾಣಿವಾಚಕವಾಗಿದ್ದು ಕವರ್ಗಪೂರ್ವ ಸ್ವರವು ಉದಾತ್ತವಾಗಿದೆ.

ಪ್ರಾಣಿವಾಚಿಯಲ್ಲದ **ಉದಕಮ್** ಶಬ್ದವು "ಕರ್ದಮಾದೀನಾಂ" (೩.೯) ಸೂತ್ರದಿಂದ ದ್ವಿತೀಯಾಕ್ಷರ ಉದಾತ್ತವನ್ನು ಹೊಂದಿದೆ.

* * *

ಸೂತ್ರ ೩೧ : **ಖಯ್ಯುವರ್ಣಂ ಕೃತ್ರಿಮಾಖ್ಯಾ ಚೇತ್ (೨.೮)**

**ಪದವಿಂಗಡನೆ** – ಖಯಿ । ಉವರ್ಣಮ್ ।

ಪೂರ್ವವತ್ ಅಧಿಕಾರಸೂತ್ರವಿದು.

**ಸೂತಾರ್ಥ:** – ಕೃತ್ರಿಮಾರ್ಥೇ ಗಮ್ಯಮಾನೇ ಪ್ರಾತಿಪದಿಕಸ್ಯ ಖಯಿ ಪರತಃ ಉಕಾರ ಉದಾತ್ತೋ ಭವತಿ ।

**ಸೂತ್ರಾರ್ಥ** – ತಸ್ಮಿನ್ ಇತಿ ನಿರ್ದಿಷ್ಟೇ ಪೂರ್ವಸ್ಯ ಎಂದಿರುವುದರಿಂದ ಖಯ್ ವರ್ಣದ ಹಿಂದಿನ ಉವರ್ಣವು ಉದಾತ್ತವಾಗುತ್ತದೆ ಎಂದು ತಿಳಿಯಬೇಕು. ಉದಾ –

**ಕಂದುಕಃ** ।

* * *

**ಸೂತ್ರ ೩೨ : ಉನರ್ವನ್ನಂತಾನಾಮ್ (೨.೯)**

ಪೂರ್ವವತ್ ಅಧಿಕಾರೋಽಯಮ್ ।

**ಸೂತ್ರಾರ್ಥ:** – ಉನ ಋ ವನ್ ಪ್ರತ್ಯಯಾಂತಾನಾಂ ಪ್ರಾತಿಪದಿಕಾನಾಮ್ ಆದ್ಯುದಾತ್ತೋ ಭವತಿ । ಉದಾ–

ವರುಣಃ । ಸ್ವಸಾರಮ್ । ಪೀವಾನಂ ಮೇಷಮ್ ಅಪಚಂತ ವೀರಾಃ (೧೦.

೨೭, ೧೭) ಪೀವನ್ ಇತಿ ಶಬ್ದಃ ।

* * *

**ಸೂತ್ರ ೩೩ : ವರ್ಣಾನಾಂ ತ–ಣ–ತಿ–ನಿತ್–ಅಂತಾನಾಮ್ (೨.೧೦)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ವರ್ಣವಾಚಿನಾಂ ತ–ಣ–ತಿ–ನಿತ್ ಪ್ರತ್ಯಯಾಂತಾನಾಮ್ ಆದ್ಯುದಾತ್ತೋ ಭವತಿ.

**ಸೂತ್ರಾರ್ಥಃ** – ವರ್ಣವಾಚಿಯಾದ ತ – ಣ – ತಿ – ನಿತ್ ಪ್ರತ್ಯಯಾಂತಶಬ್ದಗಳಿಗೆ ಆದ್ಯುದಾತ್ತ ಬರುತ್ತದೆ. ಉದಾ–

**ಏತಃ** । ವರ್ಣವಾಚಿತ್ವಾತ್ ತಾಂತಸ್ಯ ಆದ್ಯುದಾತ್ತತ್ವಮ್ । **ಹರಿಣಃ** । **ಶಿತಿಃ**। **ಪೃಶ್ನಿಃ** । **ಹರಿತ್** ॥ ಕಿಂತು **ಶ್ವೇತಃ** ಅತ್ರ ವರ್ಣವಾಚಿತ್ವೇಽಪಿ ತಾಂತಸ್ಯಾಪಿ ಅಂತೋದಾತ್ತತ್ವಮೇವ । ಘೃತಾದಿತ್ವಾತ್ ಅಂತೋದಾತ್ತತ್ವಮ್ । ಅಥವಾ ಛಂದಸಿ ವಾ ಇತಿ ಸರ್ವೇ ವಿಧಯಃ ಛಂದಸಿ ವೈಕಲ್ಪಿಕಾಃ ಇತಿ ಪರಿ ಭಾಷಾಯಾಃ ಅಂತ್ಯೋದಾತ್ತತ್ವಂ ಸ್ಯಾತ್ ॥

ಪಾಣಿನಿಯು ಒಟ್ಟು ಹದಿಮೂರು ಬಾರಿ **"ಛಂದಸಿ ಬಹುಲಮ್"** ಸೂತ್ರ ಹೇಳಿದ್ದಾನೆ. ಹಾಗೂ ಒಮ್ಮೆ **"ವ್ಯತ್ಯಯೋ ಬಹುಲಮ್"** ಹೇಳಿ ಈ ವೈಕಲ್ಪಿಕತೆಯನ್ನು ಸಮರ್ಥಿಸಿದ್ದಾನೆ. ಇದೂ ಕೂಡ ವೈದಿಕ ಸ್ವರವ್ಯತ್ಯಯವೆಂದು ತಿಳಿಯಬೇಕು.

* * *

**ಸೂತ್ರ ೩೪ : ಹ್ರಸ್ವಾಂತಸ್ಯ ಹ್ರಸ್ವಮ್ ಅನೃತ್ ತಾಚ್ಛೀಲ್ಯೇ (೨.೧೧)**

**ಸೂತ್ರಾರ್ಥಃ** – ತಾಚ್ಛೀಲ್ಯೇ ಗಮ್ಯಮಾನೇ ಹ್ರಸ್ವಾಂತಸ್ಯ ಪ್ರಾತಿಪದಿಕಸ್ಯ ಯದ್ ಆದ್ಯಮ್ ಋಕಾರಭಿನ್ನಂ ಹ್ರಸ್ವಸಂಜ್ಞಕಮ್ ಅಕ್ಷರಂ ತತ್ ಉದಾತ್ತಂ ಭವತಿ ॥ ಅನೃತ್ ಎಂಬಲ್ಲಿ ನಞ್ ಸಮಾಸವಾಗಿದೆ. ಯಾವುದರಲ್ಲಿ ಹ್ರಸ್ವ ಋಕಾರವಿಲ್ಲವೋ ಅಂತಹ ಪ್ರಾತಿಪದಿಕವೆಂದರ್ಥ.

**ಸೂತ್ರಾರ್ಥ** – ತಾಚ್ಛೀಲ್ಯಾರ್ಥದಲ್ಲಿರುವ ಹ್ರಸ್ವಾಂತ ಪ್ರಾತಿಪದಿಕದಲ್ಲಿ ಋಕಾರ ಭಿನ್ನವಾದ ಆದಿವರ್ಣವು ಉದಾತ್ತವಾಗುತ್ತದೆ. ಉದಾ–

**ಮುನಿಃ** ಮೌನಂ ತಚ್ಛೀಲಮಿತಿ ತಾಚ್ಛೀಲ್ಯಾರ್ಥಃ ಗಮ್ಯತೇऽತ್ರ । **ಕಪಿಃ** । ಚಲನಂ ತಚ್ಛೀಲಮಿತಿ ಆದ್ಯುದಾತ್ತತ್ವಮ್ । ತಾಚ್ಛೀಲ್ಯೇ ಇತಿ ಕಿಮ್ – **ಜಡಃ** । **ಬಧಿರಃ** । ಹ್ರಸ್ವಾಂತಸ್ಯ ಇತಿ ಕಿಮ್? **ವಧೂಃ** । ತಾಚ್ಛೀಲ್ಯಾರ್ಥಃ ಗಮ್ಯತೇ ಕಿಂತು ಹ್ರಸ್ವಾಂತತ್ವಂ ನಾಸ್ತಿ । ಅತಂ ಆದ್ಯುದಾತ್ತತ್ವಂ ನ ಭವತಿ । **ಪ್ರಾಜ್ಞಮ್** – ಅತ್ರ ಉಭಯಯಮಪಿ ಅಸ್ತಿ ಕಿಂತು ಆದಿಃ ಹ್ರಸ್ವೋ ನ । **ನೃಶಂಸಃ** । ಅತ್ರ ಆದಿಃ ಋಕಾರಃ ಅತಃ ನ ॥ **ತೃಣಕಮ್** । ಅತ್ರಾಪಿ ಪೂರ್ವವತ್ ॥

* * *

**ಸೂತ್ರ ೩೫ :** **ಅಕ್ಷಸ್ಯ ಅದೇವನಸ್ಯ ( ೨.೧೨)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ದೇವನಭಿನ್ನಸ್ಯ ಅಕ್ಷಪ್ರಾತಿಪದಿಕಸ್ಯ ಆದ್ಯುದಾತ್ತೋ ಭವತಿ ।

**ಅಕ್ಷಶಬ್ದಾರ್ಥಾಃ – ದ್ಯೂತೇऽಕ್ಷೇ ಶಾರಿಫಲಕೇऽಪ್ಯಾಕರ್ಷೋऽಥಾಕ್ಷ**ಮಿಂದ್ರಿಯೇ । ನಾ ದ್ಯೂತಾಂಗೇ ಕರ್ಷಚಕ್ರೇ ವ್ಯವಹಾರೇ ಕಲಿದ್ರುಮೇ ॥ ಅ.ಕೋ. ೩.೨೨೨

ಉದಾ– **ಅಕ್ಷಃ** ।

ದೇವನಾರ್ಥೇ ತು ಅಂತೋದಾತ್ತತ್ವಮ್ । ಅಕ್ಷೈರ್ಮಾ ದೀವ್ಯಃ ॥ (೧೦.೩೪.೧೩)

* * *

**ಸೂತ್ರ ೩೬ :** **ಅರ್ಧಸ್ಯ ಅಸಮದ್ಯೋತನೇ (೨.೧೩)**

**ಸೂತ್ರಾರ್ಥಃ** – ಅವಿಭಾಗೇऽರ್ಥೇ ಗಮ್ಯಮಾನೇऽರ್ಧಸ್ಯ ಪ್ರಾತಿಪದಿಕಸ್ಯ ಆದಿಃ ಉದಾತ್ತೋ ಭವತಿ । ಅಸಮದ್ಯೋತನಂ ನಾಮ ವಿಭಾಗಾರ್ಥಂ ವಿನಾ ॥

**ಅರ್ಧೋ ಗ್ರಾಮಸ್ಯ** ॥

**ಸೂತ್ರಾರ್ಥ–** ಸಮವಿಭಾಗವೆಂಬ ಅರ್ಥವು ಕಂಡು ಬರದಿರುವಾಗ ಅರ್ಧಶಬ್ದವು ಆದ್ಯುದಾತ್ತವಾಗುತ್ತದೆ. ಉದಾ –

**ಅರ್ಧೋ ಗ್ರಾಮಸ್ಯ ॥ ಅನ್ಯತ್ರ ಅರ್ಧಂ ಪಿಪ್ಪಲ್ಯಾಃ । ಅತ್ರ ಸಮವಿಭಾಗಃ ಅರ್ಧಶಬ್ದಾರ್ಥಃ । ಅತಃ ಅಂತೋದಾತ್ತತ್ವಮ್ ॥**

ಪುಲ್ಲಿಂಗದಲ್ಲಿ ಅರ್ಧಶಬ್ದವು ಖಂಡಾರ್ಥಕ. ನಪುಂಸಕಲಿಂಗದಲ್ಲಿ ಒಂದು ಭಾಗವೆಂದಷ್ಟೇ ಅರ್ಥ.

**"ಭಿತ್ತಂ ಶಕಲಖಂಡೇ ವಾ ಪುಂಸ್ಯರ್ಧೋಽರ್ಧಂ ಸಮೇಽಂಶಕೇ" ॥** ಅ.ಕೋ.೧.೩.೧೬)

* * *

**ಸೂತ್ರ ೩೭ : ಪೀತದ್ರ್ವರ್ಥಾನಾಮ್(೨.೧೪)**

ಪೂರ್ವವತ್ ಅಧಿಕಾರಸೂತ್ರಮಿದಮ್ ।

**ಸೂತ್ರಾರ್ಥಃ** – ಪೀತದ್ರುವಾಚಿನಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ಭವತಿ ।

**ಸೂತ್ರಾರ್ಥ** – ಪೀತದ್ರು ಎಂಬುದು ಒಂದು ವೃಕ್ಷವಿಶೇಷ. ಅಮರಕೋಶದಲ್ಲಿ ಇದಕ್ಕೆ ಮೂರು ಪರ್ಯಾಯ ಪದಗಳಿವೆ– ೧ ಪೀತದ್ರುಃ ೨ ಸರಲಃ ೩ ಪೂತಿಕಾಷ್ಠಮ್ । ಪೀತದ್ರುವಾಚಿಶಬ್ದವು ಆದ್ಯುದಾತ್ತವಾಗುತ್ತದೆ. ಉದಾ –

**ಪೀತದ್ರುಃ । ಸರಲಃ । ಪೂತಿಕಾಷ್ಠಮ್ ॥**

* * *

**ಸೂತ್ರ ೩೮ : ಗ್ರಾಮಾದೀನಾಂ ಚ (೨.೧೫)**

**ಸೂತ್ರಾರ್ಥಃ** – ಗ್ರಾಮಾದಿಗಣಪಠಿತವಾದ ಪ್ರಾತಿಪದೊಕಗಳು ಆದ್ಯುದಾತ್ತವೆನಿಸುತ್ತವೆ. ಉದಾ–

**ಗ್ರಾಮಃ । ಸೋಮಃ । ಯಾಮಃ ॥**

**ಸೂತ್ರಾರ್ಥ** – ಯಾವಶಬ್ದಕ್ಕೆ ಆದ್ಯುದಾತ್ತತ್ವವನ್ನು ಹೇಳಿಲ್ಲವೋ ಅವನ್ನು ಗ್ರಾಮಾದಿ ಗಣದಲ್ಲಿ ಸೇರಿಸಬಹುದಾಗಿದೆ.

* * *

**ಸೂತ್ರ ೩೯ : ಲುಬಂತಸ್ಯ ಉಪಮೇಯನಾಮಧೇಯಸ್ಯ (೨.೧೬)**

ಅಧಿಕಾರಸೂತ್ರೋಽಯಮ್ ।

**ಸೂತ್ರಾರ್ಥಃ** –ಉಪಮೇಯವಾಚಕಾಸ್ಯ ಲುಬಂತಸ್ಯ ಪ್ರಾತಿಪದಿಕಸ್ಯ ಆದ್ಯುದಾತ್ತೋ ಭವತಿ । ಸ್ಫಿಗಂತಸ್ಯೇತಿ ಪಾಠಾಂತರಮ್ । ಲುಪ್ ಇತ್ಯೇವಾರ್ಥಃ । ಪ್ರತ್ಯಯಸ್ಯ ಲುಕ್ ಶ್ಲು ಲುಪಃ (ಪಾ.೧.೧.೬)

**ಸೂತ್ರಾರ್ಥ** – ಲುಪ್ ಆದ ಪ್ರತ್ಯಯವನ್ನು ಹೊಂದಿರುವ ಉಪಮೇಯವಾಚಿಯಾದ ಪ್ರಾತಿಪದಿಕವು ಆದ್ಯುದಾತ್ತವಾಗುತ್ತದೆ. ಉದಾ–

**ಚಂಚಾ** । ಸಂಜ್ಞಾರ್ಥವು ತೋರಿಬರುವಾಗ ಚಂಚಾ ಶಬ್ದದ ಮುಂದೆ ಇವಾರ್ಥದಲ್ಲಿ ಕನ್ ಪ್ರತ್ಯಯ ಬಂದು "ಲುಮ್ಮನುಷ್ಯೇ" (೫.೩.೯೮) ಎಂದು ಲೋಪವಾಗಿದೆ. ಚಂಚಾ ಇವ ಮನುಷ್ಯಃ । 'ಚಂಚಾ' ಎಂಬರ್ಥದಲ್ಲಿ ಉಪಮೇಯ ವಾಚಿಯಾದ ಚಂಚಾಶಬ್ದವು ಆದ್ಯುದಾತ್ತವಾಗಿದೆ.

೨. **ಶಿವಃ** । ಶಿವಃ ಇವ ಶಿವಃ ಇತ್ಯರ್ಥೇ ಕನ್ ಪ್ರತ್ಯಯಃ ಪ್ರಾಪ್ತಃ । "ಜೀವಿಕಾರ್ಥೇ ಚಾಪಣ್ಯೇ" (ಪಾ. ೫.೩.೯೯) ಸೂತ್ರದಿಂದ ಪ್ರತ್ಯಯವು ಲುಪ್ ಆಗಿದೆ. ಆದುದರಿಂದ ಶಬ್ದವು ಆದ್ಯುದಾತ್ತವಾಗಿದೆ. ಲುಪ್ ಇತಿ ಕಿಂ? **ಅಗ್ನಿರ್ಮಾಣವಕಃ** ಎಂಬಲ್ಲಿ ಉಪಮೇಯವಾಚಿಯಾದರೂ ಪ್ರತ್ಯಯಕ್ಕೆ ಲುಪ್ ಪಾರದಿರುವುದರಿಂದ ಆದ್ಯುದಾತ್ತವಾಗಿಲ್ಲ.

**ವರಣಾಃ** ಇಲ್ಲಿ ಅಣ್ ಪ್ರತ್ಯಯವು ಲುಪ್ ಆಗಿದ್ದರೂ(ಅದೂರಭವಶ್ಚ ಪಾ.೪.೨.೭೦) ಉಪಮೇಯವಾಚಿಯಲ್ಲದಿರುವುದರಿಂದ ಆದ್ಯುದಾತ್ತವಾಗಿಲ್ಲ.

* * *

**ಸೂತ್ರ ೪೦ : ನ ವೃಕ್ಷಪರ್ವತವಿಶೇಷವ್ಯಾಘ್ರಸಿಂಹಮಹಿಷಾಣಾಮ್(೨.೧೭)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ಉಪಮೇಯವಾಚಿನಾಂ ಲುಬಂತಾನಾಂ ವೃಕ್ಷವಿಶೇಷಾಣಾಂ ಪರ್ವತವಿಶೇಷಾಣಾಂ ವ್ಯಾಘ್ರಸಿಂಹಮಹಿಷಾಣಾಮ್ ಆದಿಃ ಉದಾತ್ತೋ ಭವತಿ । ತಾಲ ಇವ ತಾಲಃ = ತಾಲಃ ।

**ಮೇರುಃ । ವ್ಯಾಘ್ರಃ । ಸಿಂಹಃ । ಮಹಿಷಃ ॥ ಸರ್ವತ್ರ ಅಂತೋದಾತ್ತತ್ವಂ ಭವತಿ ॥**

ವಿಶೇಷಶಬ್ದ ನೀಡಿದುದರಿಂದ ವೃಕ್ಷಾದಿವಾಚಕ ಸಾಮಾನ್ಯಶಬ್ದಗಳು ಆದ್ಯುದಾತ್ತ ಹೊಂದಬಹುದೆಂದಾಯಿತು.

ವೃ॒ಕ್ಷಃ । ಪರ್ವ॑ತಃ ॥

* * *

**ಸೂತ್ರ ೪೧ : ರಾಜವಿಶೇಷಸ್ಯ ಯಮನ್ವಾ ಚೇತ್ (೨.೧೮)**

ಪೂರ್ವವತ್ ಅಧಿಕಾರಃ । ಲುಬಂತಸ್ಯೋಪಮೇಯನಾಮಧೇಯಸ್ಯೇತಿ (೨.೧೬) ಅನುವರ್ತತೇ ।

**ಸೂತ್ರಾರ್ಥಃ** – ಉಪಮೇಯವಾಚಿನೋ ಲುಬಂತಸ್ಯ ರಾಜವಿಶೇಷಸ್ಯ ಪ್ರಾತಿಪದಿಕಸ್ಯ ವೃದ್ಧಸಂಜ್ಞಕಃ ಆದಿಃ ಉದಾತ್ತೋ ಭವತಿ । ಉದಾ–

**ಆಂಗ॑ಃ ॥ ಆಂಗ ಇವ ಆಂಗೋಽಯಮ್** ॥

**ಸೂತ್ರಾರ್ಥ** – ಉಪಮೇಯವಾಚಿಯಾದ ವೃದ್ಧಸಂಜ್ಞೆಯನ್ನು ಹೊಂದಿರುವ ಲುಬಂತವಾದ ರಾಜವಿಶೇಷ ಪ್ರಾತಿಪದಿಕವು ಆದ್ಯುದಾತ್ತವಾಗುತ್ತದೆ। ಉದಾ–

ಅಂಗ ಇವ ಅಯಮ್ **ಆಂಗ॑ಃ** ॥

ಇಲ್ಲಿ ಅಂಗಶಬ್ದಕ್ಕೆ ದ್ವ್ಯಞ್ ಮಗಧ ಕಲಿಂಗಸೂರಮಸಾತ್ ಅಣ್(ಪಾ.೪.೧.೧೭೦) ಸೂತ್ರದಿಂದ ಅಣ್ ಪ್ರತ್ಯಯ ಬಂದು ಇವಾರ್ಥದಲ್ಲಿರುವ ಕನ್ ಪ್ರತ್ಯಯವು "ದೇವಪಥಾದಿಭ್ಯಶ್ಚ" (ಪಾ.೫.೩.೧೦೦) ಸೂತ್ರದಿಂದ ಲುಪ್ ಆಗಿದೆ. ಆಂಗಶಬ್ದವು **"ತದ್ಧಿತೇಷು ಅಚಾಮ್ ಆದೇಃ"** ಸೂತ್ರದಿಂದ ವೃದ್ಧಿಯಾಗಿದ್ದು ತದ್ಧಿತಪ್ರತ್ಯಯ ಅಚ್ ವೃದ್ಧಿಯನ್ನು ವೃದ್ಧಸಂಜ್ಞೆಯನ್ನು ಹೊಂದುತ್ತದೆ. ಇಲ್ಲಿ "ಆಂಗ ಇವ ಅಯಂ ಪ್ರತಿಕೃತಿಃ" ಎಂಬರ್ಥದಲ್ಲಿ ಪ್ರತ್ಯಯ ಬಂದಿರುವುದರಿಂದ ಉಪಮೇಯವಾಚಿಯಾಗಿದೆ. ಆದುದರಿಂದ ಈ ಶಬ್ದವು ಈ ಸೂತ್ರದಂತೆ ಆದ್ಯುದಾತ್ತವಾಗುತ್ತದೆ.

* * *

**ಸೂತ್ರ ೪೨ : ಲಘಾವಂತೇ ದ್ವಯೋಶ್ಚ ಬಹ್ವಷೋ ಗುರುಃ (೨.೧೯)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ಶಬ್ದಸ್ಯ ಅಂತೇ ಏಕಾಕ್ಷರೇ ಲಘೌ ದ್ವಯೋಃ ವಾ ಅಕ್ಷರಯೋಃ ಲಘ್ವೋಃ ಬಹ್ವಚಃ ಪ್ರಾತಿಪದಿಕಸ್ಯ ಯತ್ ಗುರುಸಂಜ್ಞಕಮ್ ಅಕ್ಷರಂ ತತ್ ಉದಾತ್ತಂ ಭವತಿ ॥ ಲಘುಃ– ಅ.ಇ.ಉ.ಋ.ಲೃ.

ಅಷ್ ಇತಿ ಅಚಃ ಪ್ರಾಚೀನಸಂಜ್ಞಾ । ಬಹ್ವಷೋ ನಾಮ ಬಹ್ವಚ ಇತ್ಯರ್ಥಃ ।

**ಸೂತ್ರಾರ್ಥ** – ಶಬ್ದಾಂತ್ಯದಲ್ಲಿ ಒಂದು ಅಥವಾ ಎರಡು ಲಘು ಅಕ್ಷರಗಳಿದ್ದರೆ ಅನೇಕಾಚ್ಕವಾದ ಶಬ್ದದಲ್ಲಿನ ಗುರು ಅಕ್ಷರವು ಉದಾತ್ತವಾಗುವುದು. ಕೇವಲ ಆದಿಯಲ್ಲಿನ ಗುರುವಷ್ಟೇ ಅಲ್ಲ ಮಧ್ಯಗುರುವೂ ಉದಾತ್ತ ವಾಗಬಹುದು. **ಉದಾ–**

೧. **ಕಲ್ಯಾಣಮ್** । ಅನೇಕಾಚ್ಕವಾದ ಪದವಿದು. ಕೊನೆಯ ಅಕ್ಷರವು ಲಘುವಾಗಿದೆ. ಮೊದಲ ಅಕ್ಷರವೂ ಸಂಯುಕ್ತಾಕ್ಷರ ಪರದಲ್ಲಿರುವುದರಿಂದ ಗುರುವಾಗಿದ್ದು ಉದಾತ್ತವಾಗುತ್ತದೆ.

೨. **ಕಲ್ಯಾಣಮ್** । ಇಲ್ಲಿ ದೀರ್ಘಾಕ್ಷರವೂ ಗುರುವಾಗುತ್ತದೆ.

೩. **ಕೋಲಾಹಲಃ । ಕೋಲಾಹಲಃ ।**

ವಿಶೇಷವಿಚಾರಃ – ೧. ಲಘಾವಂತೇ ಎಂದಿರುವುದರಿಂದ ವಾತಪ್ರಮೀಶಬ್ದವು ಅನೇಕಾಚ್ಕವಾದರೂ ಅಂತ ಲಘುವಾಗದಿರುವುದರಿಂದ "ಫಿಷೋ ಅಂತ ಉದಾತ್ತಃ" ಎಂಬುವುದಾಗಿ ಅಂತೋದಾತ್ತವಾಗುತ್ತದೆ.

೨. **ದೇವಃ – ಬಹ್ವಷಃ** ಎಂದು ಬಹುವಚನವಿರುವುದರಿಂದ ಆದ್ಯುದಾತ್ತವಾಗಿಲ್ಲ.

೩. ಗುರುಃ ಶಬ್ದದ ಪ್ರಯೋಜನ. **"ಕಿಸಲಯಮ್"** ಇಲ್ಲಿ ಅನೇಕಾಚ್ಕವೂ ಅಂತ ಲಘುವೂ ಆಗಿದ್ದರೂ ಗುರುತ್ವವಿಲ್ಲದ ಪ್ರಯುಕ್ತ ಅಂತೋದಾತ್ತವೇ ಆಗಿದೆ.

* * *

**ಸೂತ್ರ ೪೩ : ಸ್ತ್ರೀವಿಷಯವರ್ಣಾಕ್ಷುಪೂರ್ವಾಣಾಮ್ (೨.೨೦)**

ಪೂರ್ವವತ್ ಅಧಿಕಾರೋಽಯಮ್ ।

**ಸೂತ್ರಾರ್ಥಃ** – ಸ್ತ್ರೀಲಿಂಗೇ ವರ್ತಮಾನಸ್ಯ ವರ್ಣವಾಚಿನೋಽಕ್ಷುಪೂರ್ವಸ್ಯ ಪ್ರಾತಿಪದಿಕಸ್ಯ ಆದಿಃ ಉದಾತ್ತೋ ಭವತಿ.

**ಸೂತ್ರಾರ್ಥ** – ಸ್ತ್ರೀಲಿಂಗವಾದ, ವರ್ಣವಾಚಿಯಾದ ಹಾಗೂ ಅಕ್ಷುಪೂರ್ವಶಬ್ದವು ಆದ್ಯುದಾತ್ತವಾಗುತ್ತದೆ. **ಉದಾ–**

**ಮಲ್ಲಿಕಾ । ಶ್ಯೇನೀ । ಹರಿಣೀ । ತರಕ್ಷುಃ ॥**

ತರಕ್ಷು ಮೃಗವಾಚಿಶಬ್ದವಾಗಿದೆ. ಇದರ ಮೈಯಲ್ಲಿ ಕಪ್ಪಾದ ಗೆರೆಗಳಿವೆ.

* * *

**ಸೂತ್ರ ೪೪ : ಶಕುನೀನಾಂ ಚ ಲಘುಪೂರ್ವಮ್ (೨.೨೧)**

ಪೂರ್ವವತ್ ಅಧಿಕಾರೋಽಯಮ್ ।

**ಸೂತ್ರಾರ್ಥಃ** – ಶಕುನಿವಾಚಿನಾಂ ಪ್ರಾತಿಪದಿಕಾನಾಮ್ ಅಂತ್ಯಾತ್ ಪೂರ್ವಂ ಯತ್ ಲಘುಸಂಜ್ಞಕಮ್ ಅಕ್ಷರಂ ತತ್ ಉದಾತ್ತಂ ಭವತಿ ।

**ಸೂತ್ರಾರ್ಥ** – ಶಕುನಿವಾಚಿಯಾದ ಪ್ರಾತಿಪದಿಕದ ಅಂತ್ಯವರ್ಣಕ್ಕಿಂತ ಹಿಂದಿರುವ ಲಘುಸಂಜ್ಞಕ ವರ್ಣವಿದ್ದು ಅದು ಉದಾತ್ತವಾಗುತ್ತದೆ. ಸೂತ್ರ ಪ್ರಕಾರ ಪ್ರಾತಿಪದಿಕ ಶಕುನಿವಾಚಕವಾಗಿರಬೇಕು. ಅಂತ್ಯಾಕ್ಷರದ ಹಿಂದಿನ ಅಕ್ಷರ ಲಘುವಾಗಿರಬೇಕು. ಲಘು ಅಕ್ಷರವು ಉದಾತ್ತ ವಾಗುತ್ತದೆ. ಶಕುನಿ ಎಂದರೆ ಪಕ್ಷಿ ಎಂದರ್ಥ. ಉದಾ–

**ಕುಕ್ಕುಟಃ । ತಿತ್ತಿರಃ । ಖಚಿಜರೀಟಃ ।**

ಸೂತ್ರದಲ್ಲಿ ಲಘು ಪೂರ್ವಮ್ ಎಂಬುವುದು ಅಸಮುಸ್ತಪದವೆಂದು ತಿಳಿಯಬೇಕು. (ಪೂರ್ವಂ ಲಘು ಇತ್ಯರ್ಥಃ )

* * *

**ಸೂತ್ರ ೪೬ : ಧಾನಾನಾಂ ಚ ವೃದ್ಧಕ್ಷಾಂತಾನಾಮ್ (೨.೨೩)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ಧಾನ್ಯವಾಚಿನಾಂ ವೃದ್ಧಸಂಜ್ಞಕಾನಾಂ ಕಕಾರಾಂತಾನಾಂ ಷಕಾರಾಂ ತಾನಾಂ ಪ್ರಾತಿಪದಿಕಾನಾಂ ಆದಿಃ ಉದಾತ್ತೋ ಭವತಿ ।

**ಸೂತ್ರಾರ್ಥ**– ಧಾನ್ಯವಾಚಿಯಾದ ವೃದ್ಧಸಂಜ್ಞೆಯನ್ನು ಹೊಂದಿರುವ ಕಕಾರಾಂತ ಅಥವಾ ಷಕಾರಾಂತ ಪ್ರಾತಿಪದಿಕಗಳು ಆದ್ಯುದಾತ್ತವಾಗುತ್ತವೆ. ಕ್+ಷ್=ಕ್ಷ್ – ಅಚಿತೇ ಯೇಷಾಂ ತೇ ಕ್ಷಾಂತಾಃ । ಉದಾ –

**ಶ್ಯಾಮಾಕಃ** । ಶ್ಯಾಮಾಕಃ ವೃದ್ಧೋ ಧಾನ್ಯವಾಚೀ ಶಬ್ದಃ । ಕಾಂತವೂ ಹೌದು ಆದುದರಿಂದ ಈ ಸೂತ್ರದಿಂದ ಆದ್ಯುದಾತ್ತವು ಬರುತ್ತದೆ.

೨. **ರಾಜಮಾಷಃ** । ಹಿಂದಿನಂತೆಯೇ ಷಾಂತತ್ವಾತ್ ಆದ್ಯುದಾತ್ತವಾಗುತ್ತದೆ.

೩. **ಮಾಷಾಃ ।** ಧಾನ್ಯವಾಚೇತಿ ಕಿಮ್?

**ಆಲೋಕಃ** । ವೃದ್ಧ ಇತಿ ಕಿಮ್ ? **ಚಣಕಃ** ।

ಕ್ಷಾಂತಾನಾಂ ಇತಿ ಕಿಮ್? ಗೋ ಧೂಮಾಃ । ಕಾಂತವೂ ಷಾಂತವೂ ಅಲ್ಲ. ಆದುದರಿಂದ ಅಂತೋದಾತ್ತವೇ ಆಗಿದೆ.

* * *

**ಸೂತ್ರ ೪೭ : ಜನಪದಶಬ್ದಾನಾಮ್ ಅಷಂತಾನಾಮ್ (೨.೨೪)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ಜನಪದವಾಚಿನಾಮ್ ಅಜಂತಾನಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ಭವತಿ । ಅಷ್ ಇತಿ ಅಚಃ ಪರ್ಯಾಯಃ ।

**ಸೂತ್ರಾರ್ಥ** – ಅಜಂತವಾದ ಹಾಗೂ ಜನಪದವಾಚಿಯಾದ ಪ್ರಾತಿಪದಿಕಗಳು ಆದ್ಯುದಾತ್ತವಾಗುತ್ತವೆ. ಉದಾ–**ಕೇಕಯಃ** । ಜನಪದವಾಚಿಯಾದ ಅಜಂತಶಬ್ದಗಳು ಆದ್ಯುದಾತ್ತವಾಗುತ್ತವೆ. ಜನಪದವಾಚೀತಿ ಕಿಮ್? **ಆಮ್ರಃ** । ಫಿಷೋಽಂತ ಉದಾತ್ತಃ ಇತಿ ಅಂತೋದಾತ್ತತ್ವಮ್ ॥ ಅಜಂತಾನಾಮ್ ಇತಿ ಕಿಮ್? **ದರದ್** ಹಲಂತತ್ವಾತ್ ಜನಪದ ವಾಚ್ಯಪಿ ಅಂತೋದಾತ್ತತ್ವಮ್ ।

* * *

**ಸೂತ್ರ ೪೮ : ಹಯಾದೀನಾಮ್ ಅಸಂಯುಕ್ತಲಾಂತಾನಾಮ್ ಅಂತಃ ಪೂರ್ವಂ ವಾ (೨.೨೫)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ಅಸಂಯೋಗಪೂರ್ವೋ ಯೋ ಲಶಬ್ದಃ ತದಂತಾನಾಂ ಹಲಾದೀನಾಂ ಪ್ರಾತಿಪದಿಕಾನಾಮ್ ಅಂತ್ಯಾತ್ ಪೂರ್ವಂ ಯದಕ್ಷರಂ ತದುದಾತ್ತಂ ವಾ ಭವತಿ । ಹಯ್ ಇತಿ ಹಲಃ ಪರ್ಯಾಯಃ । ಹಲೋಽನಂತರಾಃ ಸಂಯೋಗಃ ।

**ಸೂತ್ರಾರ್ಥ** – ಅಸಂಯುಕ್ತ ಲಕಾರವನ್ನು ಅಂತ್ಯದಲ್ಲಿ ಹೊಂದಿರುವ ಹಲಾದಿಯಾದ ಜನಪದವಾಚಿಯಾದ ಪ್ರಾತಿಪದಿಕಗಳ ಅಂತ್ಯಪೂರ್ವಸ್ವರವು ವಿಕಲ್ಪವಾಗಿ ಉದಾತ್ತವಾಗುತ್ತದೆ. ಉದಾ–

ಹಲಃ । ಹಲಃ । ಶಲಲಮ್ । ಶಲಲಮ್ । ಪಂಚಾ॥ಲಾಃ । ಪಂಚಾಲಾಃ (ಜನಪದಶಬ್ದಾನಾಮ್ ಇತ್ಯಾದ್ಯುದಾತ್ತತ್ವಮ್) ಪಲಲಮ್ । ಪಲಲಮ್ । ಪಕ್ಷೇ ಅಂತೋದಾತ್ತತ್ವಮ್ । ಕೋಸಲಾಃ ॥ ಕೋಸಲಾಃ ॥ ಹಯಾದೀನಾಮಿತಿ ಕಿಮ್? ಏಕಲಃ । ಮಲ್ಲಃ । (ಪ್ರಥಮಃ ಅಜಾದಿಃ ದ್ವಿತೀಯಃ ಸಂಯುಕ್ತಲಃ ॥

* * *

**ಸೂತ್ರ ೪೯ : ಇಗಂತಾನಾಂ ಚ ದ್ವ್ಯಷಾಮ್ (೨.೨೬)**

ಪೂರ್ವವತ್ ಅಧಿಕಾರಃ ।

**ಸೂತ್ರಾರ್ಥಃ** – ಇಗಂತಾನಾಂ ದ್ವ್ಯಚಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ಭವತಿ । ದ್ವ್ಯಷ್ ಇತಿ ದ್ವ್ಯಚಃ ಇತಿ ಸಂಜ್ಞಾ । ಇಕ್ ಇತಿ ಇ ಉ ಋ ಲೃ ವರ್ಣಾನಾಂ ಸಂಜ್ಞಾ ॥

**ಸೂತ್ರಾರ್ಥ** – ಇಗಂತವಾದ ದ್ವ್ಯಚ್ಕವಾದ ಪ್ರಾತಿಪದಿಕಗಳು ಆದ್ಯುದಾತ್ತವೆನಿಸುತ್ತವೆ. ಉದಾ–

ಕೃಷಿಃ ।

ಕೇಚನ ಅತ್ರಾಪಿ ಜನಪದಶಬ್ದಾನಾವ್ ಇತ್ಯಸ್ಯ ಅನುವರ್ತನಂ ಕುರ್ವತೇ ॥ ತನ್ಮತೇ **ಕುರವಃ** ಇತಿ ಉದಾಹರಣಂ ಭವತಿ ॥

**ವಿಶೇಷ** – ಸೂತ್ರದಲ್ಲಿ ದ್ವ್ಯಷಾಂ ಎಂದುದರಿಂದ ವಸಾತಯಃ ಎಂಬಲ್ಲಿ ಇಗಂತ ವಾದರೂ ಆದ್ಯುದಾತ್ತವಾಗಲಾರದು.

॥ ಹರಿಃ ಓಂ ಹರಿಃ ಓಂ ॥

* * *

## ಅಥ ತೃತೀಯಃ ಪಾದಃ

### ಸೂತ್ರ ೫೦ : ಅಥ ದ್ವಿತೀಯಂ ಪ್ರಾಗೀಷಾತ್ (೩.೧)

ಅಧಿಕಾರೋಽಯಮ್ । **"ಈಷಾಂತಸ್ಯ ಹಯಾದೇಃ ಆದಿರ್ವಾ"** (ಫಿ.೩.೧೭) ಇತ್ಯಸ್ಮಾತ್ ಪ್ರಾಕ್ ।

**ಸೂತ್ರಾರ್ಥಃ** – ಈಷಾಂತಸ್ಯ ಹಲಾದೇಃ ಪ್ರಾತಿಪದಿಕಸ್ಯ ಆದಿಃ ಅಕ್ಷರಮ್ ಉದಾತ್ತಂ ವಾ ಭವತಿ ಪಕ್ಷೇ ಯಥಾಪ್ರಾಪ್ತಂ ದ್ವಿತೀಯಮ್ ಅಕ್ಷರಮ್ ಉದಾತ್ತಮ್ ॥

**ಹಲೀಷಾ। ಹಲೀಷಾ। ಮನೀಷಾ। ಮನೀಷಾ। ಲಾಂಗಲೀಷಾ। ಲಾಂಗಲೀಷಾ ॥**

ನಾತ್ರ ಮಂಜೂಷಾ ಈಷಾಂತತ್ವಾಭಾವಾತ್ ।

ಅಥ ಇತಿ ಪ್ರಕರಣಾರಂಭದ್ಯೋತಕಃ । ದ್ವಿತೀಯಮಿತಿ ಅಕ್ಷರಮ್ । ಅಂಬರೀಷಮ್ ನಾತ್ರಾಪಿ ಅಜಾದಿತ್ವಾತ್ । **"ಈಷಾಂತಸ್ಯ ಹಲಾದೇಃ ಆದಿರ್ವಾ"** ಇತಿ ಸೂತ್ರಾತ್ ಪ್ರಾಕ್ ಪ್ರಾತಿಪದಿಕಸ್ಯ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತೀತಿ ವೇದಿತವ್ಯಮ್" ॥

**ಸೂತ್ರಾರ್ಥ**– ಹಲಾದಿಯಾದ ಈಷಾಂತವಾದ ಪ್ರಾತಿಪದಿಕವು ವಿಕಲ್ಪವಾಗಿ ಆದ್ಯುದಾತ್ತವಾಗುತ್ತದೆ ಇಲ್ಲದಿದ್ದರೆ ಯಥಾಪ್ರಾಪ್ತವಾದ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. ಉದಾ –

**ಹಲೀಷಾ। ಹಲೀಷಾ ॥ ಮನೀಷಾ। ಮನೀಷಾ ॥ ಲಾಂಗಲೀಷಾ। ಲಾಂಗಲೀಷಾ ॥**

ಪ್ರತ್ಯುದಾಹರಣೆ – ಮಂಜೂಷಾ । ಇಲ್ಲಿ ಹಲಾದಿತ್ವ ಇದ್ದರೂ ಈಷಾಂತತ್ವ ವಿಲ್ಲದಿರುವುದರಿಂದ ಆದ್ಯುದಾತ್ತತ್ವವಿಲ್ಲ.

* * *

### ಸೂತ್ರ ೫೧ : ತ್ರ್ಯಚಾಂ ಪ್ರಾಙ್ ಮಕರಾತ್(೩.೨)

ಪೂರ್ವವತ್ ಅಧಿಕಾರೋಽಯಮ್ ।

**ಸೂತ್ರಾರ್ಥಃ** – **"ಮಕರವರೂಢ"** (೩.೮) ಇತ್ಯತಃ ಪ್ರಾಕ್ ತ್ರ್ಯಚಾಂ ಪ್ರಾತಿಪದಿಕಾನಾಂ ದ್ವಿತೀಯಮಕ್ಷರಮ್ ಉದಾತ್ತಂ ಭವತೀತಿ ವೇದಿತವ್ಯಮ್।

**ಸೂತ್ರಾರ್ಥ** – **"ಮಕರವರೂಢ"** (೩. ೨) ಸೂತ್ರಕ್ಕಿಂತ ಮೊದಲು ಪ್ರಾತಿಪದಿಕಗಳ

ದ್ವಿತೀಯಾಕ್ಷರವು ಉದಾತ್ತವಾಗುತ್ತದೆ ಎಂದು ತಿಳಿಯಬೇಕು.

* * *

**ಸೂತ್ರ ೫೨ : ಸ್ವಾಂಗಾನಾಮ್ ಅಕುರ್ವಾದೀನಾಮ್ (೩.೩)**

**ಸೂತ್ರಾರ್ಥಃ –** ಕವರ್ಗೀಯವರ್ಣರೇಫವಕಾರಾದಿವರ್ಜಿತಾನಾಂ ಸ್ವಾಂಗ ವಾಚಿನಾಂ ತ್ರ್ಯಚಾಂ ಪ್ರಾತಿಪದಿಕಾನಾಂ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ ॥

**ಸೂತ್ರಾರ್ಥ –** ಕವರ್ಗೀಯವರ್ಣ, ರೇಫ ಹಾಗೂ ವಕಾರಾದಿ ವರ್ಣಗಳಿಲ್ಲದ ಮೂರು ಸ್ವರಾಕ್ಷರಗಳಿಂದ ಕೂಡಿದ ಪ್ರಾತಿಪದಿಕಗಳ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. ಉದಾ–

**ಲಲಾಟಮ್ ।**

ಇಲ್ಲಿ ಕವರ್ಗೀಯವರ್ಣವಾಗಲೀ ರೇಫ(ರಕಾರ)ವಾಗಲೀ ಆದಿಯಲ್ಲಿ ವಕಾರವೂ ಇಲ್ಲವಾದುದರಿಂದ ಹಾಗೂ ಪ್ರಾತಿಪದಿಕವು ಮೂರು ಸ್ವರವರ್ಣಗಳಿಂದ ಕೂಡಿರುವುದರಿಂದಲೂ ಸೂತ್ರದಲ್ಲಿ ಹೇಳಿದಂತೆ ದ್ವಿತೀಯಸ್ವರಾಕ್ಷರವು ಉದಾತ್ತ ವಾಗಿದೆ.

**ಪ್ರತ್ಯುದಾಹರಣೆ– ಕಪೋಲಃ** । ಅತ್ರ ತು ಮಧ್ಯೋದಾತ್ತಃ । **ರಸನಾ । ವದನಮ್** ॥

ಈ ಮೇಲಿನ ಪ್ರತ್ಯುದಾಹರಣೆಗಳಲ್ಲಿ ಕ,ರ ಹಗೂ ವಕಾರಗಳಿರುವುದರಿಂದ ಈ ಸೂತ್ರದಂತೆ ದ್ವಿತೀಯಾಕ್ಷರವು ಉದಾತ್ತವಾಗುವುದಿಲ್ಲ. ಕಪೋಲಃ ಎಂಬಲ್ಲಿ ಮಧ್ಯೋದಾತ್ತತ್ವ

* * *

**ಸೂತ್ರ ೫೩ : ಮಾದೀನಾಂ ಚ (೩.೪)**

**ಸೂತ್ರಾರ್ಥಃ –** ಮಕಾರಾದೀನಾಂ ತ್ರ್ಯಚಾಂ ಪ್ರಾತಿಪದಿಕಾನಾಂ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ ।

**ಸೂತ್ರಾರ್ಥ –** ಮಕಾರಾದಿಯಾದ ಮೂರು ಅಚ್‌ಗಳನ್ನು ಹೊಂದಿರುವ ಪ್ರಾತಿಪದಿಕಗಳ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. ಉದಾ–

**ಮಕರಃ । ಮಹೇಂದ್ರಃ ।**

ಮಾದೀನಾಮ್ ಇತಿ ಕಿಮ್? ವಾದನಮ್ ।

ಇದು ತ್ರ್ಯಚ್ಕವಾದರೂ ಮಾದಿಯಲ್ಲ ಆದುದರಿಂದ ಸ್ವಾಂಗಶಿಟಾಮ್ ಎಂಬ ಸೂತ್ರದಿಂದ ಆದ್ಯುದಾತ್ತ. ತ್ರ್ಯಚ್ಕವೆಂದರೆ ಮೂರು ಅಚ್‌ಗಳನ್ನು ಹೊಂದಿರುವ ಎಂದರ್ಥ. ಮಾದಿಯೆಂದರೆ ಮಕಾರಾದಿಯೆಂದರ್ಥ.

* * *

**ಸೂತ್ರ ೫೪ : ಶಾದೀನಾಂ ಶಾಕಾನಾಮ್ (೩.೫)**

**ಸೂತ್ರಾರ್ಥಃ** – ಶಕಾರಾದೀನಾಂ ಶಾಕವಾಚಿನಾಂ ತ್ರ್ಯಚಾಂ ಪ್ರಾತಿಪದಿಕಾನಾಂ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ ।

**ಸೂತ್ರಾರ್ಥ** – ಶಕಾರಾದಿ ತ್ರ್ಯಚ್ಕವಾದ ಶಾಕವಾಚಿಯಾದ ಪ್ರಾತಿಪದಿಕದ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. ಉದಾ–

೧. **ಶೀತನ್ಯಾ** । ಇದು ಶಾಕವಾಚಿಶಬ್ದವಾಗಿದ್ದು ಶಕಾರಾದಿ ಹಾಗೂ ಮೂರು ಸ್ವರಾಕ್ಷರಯುಕ್ತವಾಗಿದೆ. ಆದುದರಿಂದ ಇದರ ದ್ವಿತೀಯಾಕ್ಷರ ಉದಾತ್ತವಾಗಿದೆ.

೨. **ಶತಪುಷ್ಪಾ** । ಇದೂ ಶಾಕವಾಚಿಯಾಗಿದ್ದು ತ್ರ್ಯಚ್ಕವಾಗಿದ್ದು ದ್ವಿತೀಯಾಚ್ ಉದಾತ್ತವಾಗಿದೆ.

* * *

**ಸೂತ್ರ ೫೫ : ಪಾಂತಾನಾಂ ಗುರ್ವಾದೀನಾಮ್ (೩.೬)**

**ಸೂತ್ರಾರ್ಥಃ** – ಗುರುಸಂಜ್ಞಕಾದೀನಾಂ ಪಕಾರಾಂತಾನಾಂ ತ್ರ್ಯಚಾಂ ಪ್ರಾತಿಪದಿಕಾನಾಂ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ । ಪಾಂತಂ ಪಕಾರಾಂತಮ್ । ಗುರುಃ ಆದೌ ಯೇಷಾಂ ತೇ ಗುರ್ವಾದಯಃ ತೇಷಾಮ್ ।

**ಸೂತ್ರಾರ್ಥ** – ಪಕಾರಾಂತ ಗುರ್ವಾದಿಯಾದ ತ್ರ್ಯಚ್ಕವಾದ ಪ್ರಾತಿಪದಿಕದ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. ಉದಾ–

**ಪಾದಪಃ । ಆತಪಃ । ಸರ್ಷಪಃ ।**

**ವಿಶೇಷಃ**– ಗುರ್ವಾದೀನಾಮ್ ಇತಿ ಕಿಮ್?

ಅನೂಪಮ್ । ಪಾಂತಾನಾಮ್ ಇತಿ ಕಿಮ್? ಪಾಟಲಾ । ತ್ರ್ಯಚಾಮ್ ಇತಿ ಕಿಮ್? ನೀಪಮ್? ।

* * *

**ಸೂತ್ರ ೫೬ : ಯುತಾನ್ಯಣ್ಯಂತಾನಾಮ್ (೩.೭)**

ಯುತಃ ಅನಿಃ ಅಣಿಃ ಏತದಂತಾನಾಮ್ ।

**ಸೂತ್ರಾರ್ಥಃ** – ಯುತಾಂತಾನಾಮ್ ಅನ್ಯಂತಾನಾಮ್ ಅಣ್ಯಂತಾನಾಂ ಚ ತ್ರ್ಯಚಾಂ ಪ್ರಾತಿಪದಿಕಾನಾಂ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ । ಅತ್ರ ಯುತ ಇತಿ ಶಬ್ದಃ । ಅನ್ಯೌ ಪ್ರತ್ಯಯೌ ।

**ಸೂತ್ರಾರ್ಥ** – ಯುತಾಂತಪ್ರಾತಿಪದಿಕಗಳು, ಅನ್ಯಂತ ಹಾಗೂ ಅಣ್ಯಂತ ತ್ರ್ಯಚ್ಕವಾದ ಪ್ರಾತಿಪದಿಕಗಳ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. "ಯುತ" ಕೊನೆಯಲ್ಲಿರುವ ಪ್ರಾತಿಪದಿಕ. "ಅನಿ" ಕೊನೆಯಲ್ಲಿರುವ ಹಾಗೂ "ಅಣಿ" ಕೊನೆಯಲ್ಲಿರುವ ಪ್ರಾತಿಪದಿಕಗಳ ದ್ವಿತೀಯಸ್ವರವು ಉದಾತ್ತವಾಗುತ್ತದೆ ಎಂದರ್ಥ. ಉದಾ –

ಅಯುತಮ್ । ಧಮನಿಃ । ವಿಪಣಿಃ ॥

* * *

**ಸೂತ್ರ ೫೭ : ಮಕರ, ವರೂಢ, ಪಾರೇವತ, ವಿತಸ್ತೇಕ್ಷ್ವಾರ್ಜಿದ್ರಾಕ್ಷಾಕಲೋಮಾ ಕಾಷ್ಠಾ ಪೇಷ್ಠಾಕಾಶೀನಾಮ್ ಆದಿರ್ವಾ (೩.೮)**

ಫಿಷಃ । ಉದಾತ್ತಃ । ದ್ವಿತೀಯಮ್ ಅಕ್ಷರಮ್ ಇತ್ಯೇತಾನಿ ಪದಾನಿ ಅನುವರ್ತಂತೇ ।

**ಸೂತ್ರಾರ್ಥಃ** – ಮಕರ–ವರೂಢ–ಪಾರೇವತ–ವಿತಸ್ತ–ಇಕ್ಷು–ಆರ್ಜಿ–ದ್ರಾಕ್ಷಾ–ಕಲಾ–ಉಮಾ–ಕಾಷ್ಠಾ–ಪೇಷ್ಠಾ–ಕಾಶೀನಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ವಾ ಭವತಿ । ಪಕ್ಷೇ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ ।

**ಸೂತ್ರಾರ್ಥ** – ಮಕರ ವರೂಢ ಪಾರೇವತ ವಿತಸ್ತಾ ಇಕ್ಷು ಆರ್ಜಿ ದ್ರಾಕ್ಷಾ ಕಲಾ ಉಮಾ ಕಾಷ್ಠಾ ಪೇಷ್ಠಾ ಹಾಗೂ ಕಾಶಿ ಈ ಪ್ರಾತಿಪದಿಕಗಳ

ಆದಿಸ್ವರಾಕ್ಷರವು ವಿಕಲ್ಪವಾಗಿ ಉದಾತ್ತವಾಗುತ್ತದೆ. ಅಥವಾ ಎರಡನೆಯ ಅಕ್ಷರವು ಉದಾತ್ತವಾಗುತ್ತದೆ. ಆದುದರಿಂದ ಪ್ರತಿ ಶಬ್ದವು ಎರಡು ಸ್ವರವನ್ನು ಹೊಂದುತ್ತದೆ. ಉದಾ–

**ಮಕರಃ । ಮಕರಃ ॥ ವರೂಢಃ । ವರೂಢಃ ॥ ಪಾರೇವತಃ । ಪಾರೇವತಃ ॥**

**ವಿತಸ್ತಾ । ವಿತಸ್ತಾ ॥ ಇಕ್ಷುಃ । ಇಕ್ಷುಃ ॥ ಆರ್ಜಿಃ । ಆರ್ಜಿಃ ॥ ದ್ರಾಕ್ಷಾ । ದ್ರಾಕ್ಷಾ ॥ ಕಲಾ ।**

**ಕಲಾ ॥ ಉಮಾ । ಉಮಾ ॥ ಕಾಷ್ಠಾ । ಕಾಷ್ಠಾ ॥ ಪೇಷ್ಠಾ । ಪೇಷ್ಠಾ ॥ ಕಾಶಿಃ । ಕಾಶಿಃ ॥**

**ವಿಶೇಷ**–ಸುಬೋಧಿನೀಕಾರನ ಹಾಗೂ ಶೇಖರಕಾರನ ಅನುಸಾರ ಕಾಶೀನ ಶಬ್ದವಿಟ್ಟುಕೊಳ್ಳಬೇಕು. ಏಕೆಂದರೆ ನುಡಭಾವ ಆರ್ಷವಾಗಿದೆ. "ಕಾಶೀನಾ ನಾಮ್ ಇತಿ ವಕ್ತವ್ಯೇ ನುಡಭಾವಾ ವಃ ಆರ್ಷಃ"(ಸುಬೋ.) "ಕಾಶೀನಾ ನಾಮ್ ಇತಿ ವಕ್ತವ್ಯೇ ನುಡಭಾವ ಆರ್ಷಃ । ಕಾಶೀನಮ್" ॥ ಶೇಖರಕಾರನ ಅನುಸಾರ "ವರೂಢ"ದ ಸ್ಥಾನದಲ್ಲಿ " ವಕುಟ" ಹಾಗೂ "ಪೇಷ್ಠಾ" ಸ್ಥಾನದಲ್ಲಿ "ಪ್ರೈಶ್ರಾ" ಎಂಬ ಪಾಠವೂ ಕಂಡು ಬರುತ್ತದೆ. ಇನ್ನೂ ಕೆಲವರು "ಕಾಷ್ಠಾ ಪ್ರೈಶ್ರಾ" ಎಂದೂ ಹೇಳುತಾರೆ. (ಶೇ.) ॥

* * *

**ಸೂತ್ರ ೫೮ : ಛಂದಸಿ ಚ (೩.೯)**

**ಸೂತ್ರಾರ್ಥಃ** – ಛಂದಸಿ ವಿಷಯೇ ಪೂರ್ವೋಕ್ತಮಕರಾದೀನಾಮ್ ಅನ್ಯೇಷಾಂ ಪ್ರಾತಿಪದಿಕಾದೀನಾಮ್ ಆದಿಃ ಉದಾತ್ತೋ ಭವತಿ ।

**ಸೂತ್ರಾರ್ಥ** – ವೇದದಲ್ಲಿ ಮಕರಾದಿ ಪ್ರಾತಿಪದಿಕಗಳು ಹಾಗೂ ತದ್ಭಿನ್ನವಾದ ಪ್ರಾತಿಪದಿಕಗಳು ವಿಕಲ್ಪವಾಗಿ ಆದ್ಯುದಾತ್ತವಾಗುತ್ತವೆ. ಉದಾ–

**ಮಕರಃ । ಮಕರಃ ॥**

* * *

**ಸೂತ್ರ ೫೯ : ಕರ್ದಮಾದೀನಾಂ ಚ (೩.೧೦)**

**ಸೂತ್ರಾರ್ಥಃ** – ಕರ್ದಮಾದಿಗಣಪಠಿತಾನಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ವಾ ಭವತಿ । ಪಕ್ಷೇ ದ್ವಿತೀಯಮ್ ಅಕ್ಷರಮ್ ಉದಾತ್ತಂ ಭವತಿ ॥

**ಸೂತ್ರಾರ್ಥ** – ಕರ್ದಮಾದಿಗಣಪಠಿತವಾದ ಪ್ರಾತಿಪದಿಕಗಳು ವಿಕಲ್ಪವಾಗಿ ಆದ್ಯುದಾತ್ತವಾಗುತ್ತವೆ. ಇಲ್ಲದಿದ್ದರೆ ದ್ವಿತೀಯಾಕ್ಷರವು ಉದಾತ್ತ

ವಾಗುತ್ತದೆ. ಉದಾ–

**ಕರ್ದಮಃ । ಕರ್ದಮಃ ॥ ಕುಲಟಾ । ಕುಲಟಾ ॥ ಉದಕಮ್ । ಉದಕಮ್ ॥**

**ಗಾಂಧಾರಿಃ । ಗಾಂಧಾರಿಃ ॥ ಕಾಶ್ಯಪಃ । ಕಾಶ್ಯಪಃ ॥**

* * *

**ಸೂತ್ರ ೬೦ : ಸುಗಂಧಿತೇಜನಸ್ಯ ತೇ ವಾ (೩.೧೧)**

**ಸೂತ್ರಾರ್ಥಃ** – ಸುಗಂಧಿತೇಜನಪ್ರಾತಿಪದಿಕಸ್ಯ "ತೇ" ಇತ್ಯಕ್ಷರಮ್ ಆದ್ಯಮ್ ಅಕ್ಷರಮ್ ದ್ವಿತೀಯಮ್ ಅಕ್ಷರಂ ಪರ್ಯಾಯೇಣ ಉದಾತ್ತಾನಿ ಭವಂತಿ ॥

**ಸೂತ್ರಾರ್ಥಃ** – ಸುಗಂಧಿತೇಜನ ಪ್ರಾತಿಪದಿಕದ "ತೇ" ಎಂಬಕ್ಷರ ದ್ವಿತೀಯಾಕ್ಷರ ಹಾಗೂ ಆದಿಯ ಅಕ್ಷರವೂ ಪರ್ಯಾಯವಾಗಿ ಉದಾತ್ತವಾಗುವುದು. ಉದಾ–

**೧. ಸುಗಂಧಿತೇಜನಃ । ೨. ಸುಗಂಧಿತೇಜನಃ । ೩. ಸುಗಂಧಿತೇಜನಃ ॥**

* * *

**ಸೂತ್ರ ೬೧ : ನಮಃ ಫಲಾಂತಾನಾಮ್ (೩.೧೨)**

**ಸೂತ್ರಾರ್ಥಃ**– ನಪುಂಸಕಲಿಂಗೇ ವರ್ತಮಾನಾನಾಂ ಫಲಾಂತಾನಾಂ ಪ್ರಾತಿಪದಿಕಾನಾಮ್ ಆದ್ಯಮ್ ಅಕ್ಷರಮ್ ಉದಾತ್ತಂ ಭವತಿ । ಪಕ್ಷೇ ದ್ವಿತೀಯಮ್ ॥

**ಸೂತ್ರಾರ್ಥ** – ಫಲಶಬ್ದಾಂತ್ಯವಾದ ನಪುಂಸಕಪ್ರಾತಿಪದಿಕಗಳು ಕ್ರಮವಾಗಿ ಮೊದಲನೆಯ ಬಳಿಕ ಎರಡನೆಯ ಅಕ್ಷರವನ್ನು ಉದಾತ್ತವಾಗಿ ಪಡೆಯುತ್ತವೆ. ಉದಾ–

**ರಾಜಾದನಫಲಮ್ । ರಾಜಾದನಫಲಮ್ ॥ ನಪ್ ಇತಿ ಕಿಮ್? ದಾಸೀ ಫಲೋ ವೃಕ್ಷಃ ॥**

ಕೆಲವು ವಿದ್ವಾಂಸರು ಈ ಸೂತ್ರದ ಸ್ಥಾನದಲ್ಲಿ **"ಲೇ ಫೋ ನಪಃ"** ಸೂತ್ರ ಉಚಿತವೆನ್ನುವರು. ಇದರಿಂದಾಗಿ ಲಕಾರವು ಪರದಲ್ಲಿರುವಾಗ ಫಕಾರವು

ಉದಾತ್ತವಾಗುತ್ತದೆ. **ಫಲಮ್** ಎಂಬ ಶಬ್ದವು ಸಿದ್ಧವಾಗುತ್ತದೆ.

**ಸಫಲಮ್** ಎಂಬ ಶಬ್ದದ ಸ್ವರವೂ ಸಿದ್ಧವಾಗುತ್ತದೆ.

* * *

**ಸೂತ್ರ ೬೨ : ಯಾಂತಸ್ಯ ಅಂತ್ಯಾತ್ ಪೂರ್ವಮ್ (೩.೧೩)**

**ಸೂತ್ರಾರ್ಥ:** –"ಯ" ಶಬ್ದಾಂತಸ್ಯ ಪ್ರಾತಿಪದಿಕಸ್ಯ ಅಂತ್ಯಾತ್ ಪೂರ್ವಮ್ ಅಕ್ಷರಮ್ ಉದಾತ್ತಂ ಭವತಿ । ಅರ್ಥ– "ಯ" ಶಬ್ದಾಂತವಾದ ಪ್ರಾತಿಪದಿಕದ ಅಂತ್ಯಪೂರ್ವಾಕ್ಷರವು ಉದಾತ್ತವಾಗುತ್ತದೆ. ಉದಾ–

**ಕುಲಾಯಃ । ಗವಯಃ । ಮಲಯಃ ॥**

* * *

**ಸೂತ್ರ ೬೩ : ಥಾಂತಸ್ಯ ಚ ನಾಲಘುನೀ (೩.೧೪)**

**ಸೂತ್ರಾರ್ಥ:** – ಥಕಾರಾಂತಸ್ಯ ಪ್ರಾತಿಪದಿಕಸ್ಯ ನಾಶಬ್ದೋ ಲಘುಸಂಜ್ಞಕಶ್ಚ ಉದಾತ್ತೌ ಭವತಃ ।

**ಸೂತ್ರಾರ್ಥ** – ಥಕಾರಾಂತವಾದ ಶಬ್ದದ "ನಾ" ಎಂಬ ಶಬ್ದವು ಅಥವಾ ಲಘುಸಂಜ್ಞೆಯ ವರ್ಣವು ಉದಾತ್ತವಾಗುತ್ತದೆ. ಉದಾ–

**ಸನಾಥಾ (ಸಭಾ) । ಸನಾಥಾ(ಸಭಾ) ॥**

ಕೆಲವು ವಿದ್ವಾಂಸರು **"ಆಂತಸ್ಯ ಚ ನಾಲಘುನೀ"** ಎಂಬ ಪಾಠ ಸ್ವೀಕರಿಸುವರು. ಆಕರಾಂತವಾದ ಶಬ್ದದ ನಾಶಬ್ದ ಅಥವಾ ಲಘುಸಂಜ್ಞೆಯುಳ್ಳ ಅಕ್ಷರವು ಉದಾತ್ತವಾಗುತ್ತದೆ. ಉದಾ–

**ನಾಸಾ । ನಾಸಾ । ದಿವಾ । ಸುಧಾ । ಮುಧಾ ॥**

* * *

**ಸೂತ್ರ ೬೪ : ಶಿಶುಮಾರೋದುಂಬರ ಬಲೀವರ್ದೋಷ್ಟ್ರಾರ ಪುರೂರವಸಾಮ್ (೩.೧೫)**

**ಸೂತ್ರಾರ್ಥ:** – ಶಿಶುಮಾರೋದುಂಬರಬಲೀವರ್ದೋಷ್ಟ್ರಾರಪುರೂರವಸಾಂ

ಪ್ರಾತಿಪದಿಕಾನಾಮ್ ಅಂತ್ಯಾತ್ ಪೂರ್ವಮ್ ಅಕ್ಷರಮ್ ಉದಾತ್ತಂ ಭವತಿ । ಪಕ್ಷೇ ದ್ವಿತೀಯಮ್ ಉದಾತ್ತಮ್ ।

**ಸೂತ್ರಾರ್ಥ** – ಶಿಶುಮಾರ–ಉದುಂಬರ–ಬಲೀವರ್ದ–ಉಷ್ಟ್ರಾರ–ಪುರೂರವಸ್ ಪ್ರಾತಿಪದಿಕಗಳ ಅಂತ್ಯಪೂರ್ವಾಕ್ಷರವು ಉದಾತ್ತವಾಗುತ್ತದೆ. ಪಕ್ಷಾಂತರದಲ್ಲಿ ದ್ವಿತೀಯಾಕ್ಷರವು ಉದಾತ್ತವಾಗುತ್ತದೆ. ಉದಾ–

**ಶಿಶುಮಾರಃ । ಶಿಶುಮಾರಃ ॥ ಉದುಂಬರಃ । ಉದುಂಬರಃ ॥ ಬಲೀವರ್ದಃ । ಬಲೀವರ್ದಃ ॥ ಉಷ್ಟ್ರಾರಃ ॥ ಪುರೂರವಾಃ । ಪುರೂರವಾಃ ॥**

* * *

**ಸೂತ್ರ ೬೫ : ಸಾಂಕಾಶ್ಯಕಾಂಪಿಲ್ಯನಾಸಿಕ್ಯದಾರ್ವಾಘಾಟಾನಾಮ್ (೩.೧೬)**

**ಸೂತ್ರಾರ್ಥಃ** – ಸಾಂಕಾಶ್ಯ–ಕಾಂಪಿಲ್ಯ–ನಾಸಿಕ್ಯ–ದಾರ್ವಾಘಾಟಾನಾಂ ಪ್ರಾತಿಪದಿಕಾನಾಮ್ ಆದಿರ್ವೋದಾತ್ತೋ ಭವತಿ । ಪಕ್ಷೇ ದ್ವಿತೀಯಾಕ್ಷರಮ್ ಉದಾತ್ತಂ ಭವತಿ ॥

**ಸೂತ್ರಾರ್ಥ** – ಸಾಂಕಾಶ್ಯ,ಕಾಂಪಿಲ್ಯ,ನಾಸಿಕ್ಯ ಹಾಗೂ ದಾರ್ವಾಘಾಟಶಬ್ದಗಳ ಆದಿ ಹಾಗೂ ದ್ವಿತೀಯಾಕ್ಷರವು ಪರ್ಯಾಯಕ್ರಮದಲ್ಲಿ ಉದಾತ್ತವಾಗುತ್ತವೆ. ಉದಾ–

**ಸಾಂಕಾಶ್ಯಃ । ಸಾಂಕಾಶ್ಯಃ ॥ ಕಾಂಪಿಲ್ಯಃ । ಕಾಂಪಿಲ್ಯಃ ॥ ನಾಸಿಕ್ಯಃ । ನಾಸಿಕ್ಯಃ ॥ ದಾರ್ವಾಘಾಟಃ । ದಾರ್ವಾಘಾಟಃ ॥**

* * *

**ಸೂತ್ರ ೬೬ : ಈಷಾಂತಸ್ಯ ಹಯಾದೇಃ ಆದಿರ್ವಾ (೩.೧೭)**

**ಸೂತ್ರಾರ್ಥಃ** – "ಈಷಾ"ಶಬ್ದಾಂತಸ್ಯ ಹಲಾದೇಃ ಪ್ರಾತಿಪದಿಕಸ್ಯ ಆದ್ಯಕ್ಷರಮ್ ಉದಾತ್ತಂ ವಾ ಭವತಿ । ಪಕ್ಷೇ ಯಥಾಪ್ರಾಪ್ತಂ ದ್ವಿತೀಯಮ್ ಅಕ್ಷರಮ್ ಉದಾತ್ತಮ್ ॥

**ಸೂತ್ರಾರ್ಥ** – "ಈಷಾ"ಶಬ್ದವನ್ನು ಅಂತ್ಯದಲ್ಲಿ ಹೊಂದಿರುವ ಹಲಾದಿಯಾದ ಪ್ರಾತಿಪದಿಕದ ಆದ್ಯಕ್ಷರವು ವಿಕಲ್ಪವಾಗಿ ಉದಾತ್ತವಾಗುತ್ತದೆ ಇಲ್ಲದಿದ್ದರೆ ಯಥಾಪ್ರಾಪ್ತವಾದ ದ್ವಿತೀಯಾಕ್ಷರವು ಉದಾತ್ತವಾಗು

ತ್ತದೆ. ಉದಾ–

**ಹಲೀಷಾ। ಹಲೀಷಾ॥ ಮನೀಷಾ। ಮನೀಷಾ॥ ಲಾಂಗಲೀಷಾ। ಲಾಂಗಲೀಷಾ॥**

ಈಷಾಂತಸ್ಯೇತಿ ಕಿಮ್? ಮಂಜೂಷಾ ॥ ಅಂಬರೀಷಮ್ ॥ ಆದ್ಯುದಾತ್ತವಿಲ್ಲ.

* * *

**ಸೂತ್ರ ೬೭ : ಉಶೀರ–ದಾಸೇರ–ಕಪಾಲ–ಪಲಾಲ–ಶೈವಾಲ–ಶ್ಯಾಮಾಕ–ಶಾರೀರ–ಶರಾವ–ಹೃದಯ–ಹಿರಣ್ಯ–ಹಿರಣ್ಯ–ಅರಣ್ಯ–ಅಪತ್ಯ–ದೇವರಾಣಾಮ್ (೩.೧೮)**

**ಸೂತ್ರಾರ್ಥಃ –** ಉಶೀರ–ದಾಸೇರ–ಕಪಾಲ–ಪಲಾಲ–ಶೈವಾಲ– ಶ್ಯಾಮಾಕ–ಶಾರೀರ–ಶರಾವ_ಹೃದಯ–ಹಿರಣ್ಯ–ಅರಣ್ಯ–ಅಪತ್ಯ ದೇವ ರಾಣಾಂ ಪ್ರಾತಿಪದಿಕಾನಾಮ್ ಆದಿಃ ಉದಾತ್ತೋ ಭವತಿ।

**ಸೂತ್ರಾರ್ಥ –** ಉಶೀರಾದಿಪ್ರಾತಿಪದಿಕಗಳು ಆದ್ಯುದಾತ್ತವನ್ನು ಹೊಂದುತ್ತವೆ. ಉದಾ–

**ಉಶೀರಮ್ । ದಾಸೇರಃ । ಕಪಾಲಃ । ಪಲಾಲಃ । ಶೈವಾಲಃ । ಶ್ಯಾಮಾಕಃ । ಶಾರೀರಃ । ಶರಾವಃ । ಹೃದಯಮ್ । ಹಿರಣ್ಯಮ್ । ಅರಣ್ಯಮ್ । ಅಪತ್ಯಮ್ । ದೇವರಃ ॥**

ಶ್ಯಾಮಾಕಗ್ರಹಣವು ಏಕೆ? ಧಾನ್ಯವಾಚಿ ಅಧಾನ್ಯವಾಚಿಯಾದ ಶ್ಯಾಮಾಕ ಶಬ್ದವಿದ್ದು ಧಾನ್ಯವಾಚಿ ಶ್ಯಾಮಾಕಶಬ್ದವು "ಧಾನ್ಯಾನಾಂ ಚ" ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ಅಧಾನ್ಯವಾಚಿ ಶ್ಯಾಮಾಕಶಬ್ದವು ಈ ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ವಾಕ್ಯದಿಂದ ಅರ್ಥನಿರ್ಣಯ.

* * *

**ಸೂತ್ರ ೬೮ : ಮಹಿಷ್ಯಷಾಢಯೋಃ ಜಾಯೇಷ್ಟಕಾಖ್ಯಾ ಚೇತ್ (೩.೧೯)**

**ಸೂತ್ರಾರ್ಥಃ –** ಮಹಿಷ್ಯಷಾಢಯೋಃ ಪ್ರಾತಿಪದಿಕಯೋಃ ಆದಿಃ ಉದಾತ್ತಃ ಸ್ಯಾತ್ ಯಥಾಸಂಖ್ಯಂ ಜಾಯಾಖ್ಯಾಯಾಮ್ ಇಷ್ಟಕಾಖ್ಯಾಯಾಂ ಚ॥

**ಸೂತ್ರಾರ್ಥ** – ಮಹಿಷೀ ಹಾಗೂ ಅಷಾಢಾ ಎಂಬೆರಡು ಪ್ರಾತಿಪದಿಕಗಳು ಆದ್ಯುದಾತ್ತವಾಗುತ್ತವೆ ಕ್ರಮವಾಗಿ ಜಾಯಾ (ಪತ್ನೀ) ಹಾಗೂ ಇಷ್ಟಕಾ ಎಂಬರ್ಥವು ಕಂಡುಬರುತ್ತಿದ್ದರೆ. **ಉದಾ** –

**ಮಹಿಷೀ (ಜಾಯಾ) । ಅಷಾಢಾ (ಇಷ್ಟಕಾ)**

॥ ಹರಿಃಓಂ ॥

* * *

## ಅಥ ಚತುರ್ಥಃ ಪಾದಃ

**ಸೂತ್ರ ೬೯ : ಶಕಟಿ–ಶಕಟ್ಯೋಃ ಅಕ್ಷರಮ್ ಅಕ್ಷರಂ ಪರ್ಯಾಯೇಣ (೪.೧)**

ಫಿಷಃ ಉದಾತ್ತಃ ಇತಿ ಪದದ್ವಯಮ್ ಅನುವರ್ತತೇ ।

**ಸೂತ್ರಾರ್ಥಃ –** ಶಕಟಿಶಕಟ್ಯೋಃ ಪ್ರಾತಿಪದಿಕಯೋಃ ಪ್ರತ್ಯೇಕವಮ್ ಅಕ್ಷರಂ ಪರ್ಯಾಯೇಣ ಉದಾತ್ತಂ ಭವತಿ ।

**ಸೂತ್ರಾರ್ಥ –** ಶಕಟಿ ಹಾಗೂ ಶಕಟೀ ಈ ಎರಡು ಶಬ್ದಗಳ ಅಕ್ಷರಗಳು ಪರ್ಯಾಯ ಕ್ರಮದಿಂದ ಉದಾತ್ತ ಸ್ವರವನ್ನು ಹೊಂದುತ್ತವೆ. ಉದಾ–

**ಶಕಟಿಃ । ಶಕಟಿಃ । ಶಕಟಿಃ ॥ ಶಕಟೀ । ಶಕಟೀ । ಶಕಟೀ ॥**

* * *

**ಸೂತ್ರ ೨೦ : ಗೋಷ್ಠಜಸ್ಯ ಬ್ರಾಹ್ಮಣನಾಮಧೇಯಸ್ಯ (೪.೨)**

ಪೂರ್ವಸೂತ್ರೋಕ್ತಾಃ ಶಬ್ದಾಃ ಅನುವರ್ತಂತೇ ।

**ಸೂತ್ರಾರ್ಥಃ –** ಬ್ರಾಹ್ಮಣನಾಮಧೇಯಸ್ಯ ಗೋಷ್ಠಜಸ್ಯ ಪ್ರಾತಿಪದಿಕಸ್ಯ ಅಕ್ಷರಮ್ ಅಕ್ಷರಂ ಕ್ರಮೇಣ ಉದಾತ್ತಂ ಭವತಿ ॥

**ಸೂತ್ರಾರ್ಥ –** ಬ್ರಾಹ್ಮಣವಾಚಿಯಾದ ಗೋಷ್ಠಜ ಪ್ರಾತಿಪದಿಕದ ಅಕ್ಷರಗಳು ಪರ್ಯಾಯಕ್ರಮದಿಂದ ಉದಾತ್ತ ಸ್ವರವನ್ನು ಹೊಂದುತ್ತವೆ. ಉದಾ–

**ಗೋಷ್ಠಜೋ ಬ್ರಾಹ್ಮಣಃ । ಗೋಷ್ಠಜೋ ಬ್ರಾಹ್ಮಣಃ । ಗೋಷ್ಠಜೋ ಬ್ರಾಹ್ಮಣಃ ॥**

**ನಾತ್ರ ಭವತಿ – ಗೋಷ್ಠಜಃ ಪಶುಃ ॥**

* * *

**ಸೂತ್ರ ೨೧ : ಪಾರಾವತಸ್ಯ ಉಪೋತ್ತಮವರ್ಜಮ್ ( ೪.೩)**

ಪೂರ್ವೋಕ್ತಪದಾನಿ ಅನುವರ್ತಂತೇ ।

**ಸೂತ್ರಾರ್ಥಃ** – ಪಾರಾವತಸ್ಯ ಪ್ರಾತಿಪದಿಕಸ್ಯ ಉಪೋತ್ತಮಂ ವರ್ಜಯಿತ್ವಾ ಶೇಷಂ ಕ್ರಮೇಣ ಉದಾತ್ತಂ ಭವತಿ ।

**ಸೂತ್ರಾರ್ಥ** – ಪಾರಾವತ ಶಬ್ದದ ಅಂತ್ಯಪೂರ್ವಾಕ್ಷರವನ್ನು ಬಿಟ್ಟು ಉಳಿದೆಲ್ಲವೂ ಪರ್ಯಾಯ ಕ್ರಮದಿಂದ ಉದಾತ್ತವಾಗುತ್ತವೆ. ಉದಾ –

ಪಾರಾವತಃ । ಪಾರಾವತಃ । ಪಾರಾವತಃ ॥

* * *

**ಸೂತ್ರ ೭೨ : ಧೂಮ್ರಜಾನು–ಮುಂಜಕೇಶ–ಕಾಲವಾಲ–ಸ್ಥಾಲೀಪಾಕಾನಾಮ್ ಅಧೂ–ಜ–ಲ–ಸ್ಥಾನಾಮ್ (೪.೪)**

**ಸೂತ್ರಾರ್ಥಃ** – ಧೂಮ್ರಜಾನು–ಮುಂಜಕೇಶ–ಕಾಲವಾಲ–ಸ್ಥಾಲೀಪಾಕಾನಾಂ ಚತುರ್ಣಾಂ ಪ್ರಾತಿಪದಿಕಾನಾಂ ಧೂ–ಜ–ಲ–ಸ್ಥಾನ್ ಚತುರೋ ವರ್ಜಯಿತ್ವಾ ಶಿಷ್ಟಾನಿ ಅಕ್ಷರಾಣಿ ಪರ್ಯಾಯೇಣ ಉದಾತ್ತಾನಿ ಭವಂತಿ ॥

**ಸೂತ್ರಾರ್ಥ** – ಧೂಮ್ರಜಾನು, ಮುಂಜಕೇಶ, ಕಾಲವಾಲ ಹಾಗೂ ಸ್ಥಾಲೀಪಾಕ ಪ್ರಾತಿಪದಿಕಗಳ ಧೂ, ಜ, ಲ, ಸ್ಥಾ ಎಂಬ ಅಕ್ಷರಗಳನ್ನು ಬಿಟ್ಟುಳಿದ ಅಕ್ಷರಗಳು ಕ್ರಮವಾಗಿ ಉದಾತ್ತವಾಗುತ್ತವೆ. ಉದಾ –

ಧೂಮ್ರಜಾನುಃ । ಧೂಮ್ರಜಾನುಃ । ಧೂಮ್ರಜಾನುಃ ॥ ಮುಂಜಕೇಶಃ । ಮುಂಜಕೇಶಃ । ಮುಂಜಕೇಶಃ ॥ ಕಾಲವಾಲಃ । ಕಾಲವಾಲಃ । ಕಾಲವಾಲಃ ॥ ಸ್ಥಾಲೀಪಾಕಃ । ಸ್ಥಾಲೀಪಾಕಃ । ಸ್ಥಾಲೀಪಾಕಃ ॥

* * *

**ಸೂತ್ರ ೭೩ : ಕಪಿಕೇಶ–ಹರಿಕೇಶಯೋಃ ಛಂದಸಿ (೪.೫)**

**ಸೂತ್ರಾರ್ಥಃ** – ಛಂದಸಿ ವಿಷಯೇ ಕಪಿಕೇಶಹರಿಕೇಶಯೋಃ ಪ್ರಾತಿಪದಿಕಯೋಃ ಪ್ರತ್ಯೇಕಮ್ ಅಕ್ಷರಮ್ ಉದಾತ್ತಂ ಭವತಿ ಪರ್ಯಾಯೇಣ ॥

**ಸೂತ್ರಾರ್ಥ** – ಛಂದೋವಿಷಯವು ತೋರುವಾಗ ಕಪಿಕೇಶ ಹಾಗೂ ಹರಿಕೇಶ ಎಂಬೆರಡು ಪ್ರಾತಿಪದಿಕಗಳ ಪ್ರತ್ಯೇಕ ಅಕ್ಷರಗಳು ಪರ್ಯಾಯವಾಗಿ ಉದಾತ್ತವಾಗುತ್ತವೆ. ಉದಾ –

ಕಪಿಕೇಶಃ । ಕಪಿಕೇಶಃ । ಕಪಿಕೇಶಃ । ಕಪಿಕೇಶಃ ॥ ಹರಿಕೇಶಃ । ಹರಿಕೇಶಃ । ಹರಿಕೇಶಃ । ಹರಿಕೇಶಃ ॥ ನಾತ್ರ ಲೋಕೇ ಭವತೀದಂ ಛಂದೋವಿಷಯತ್ವಾಭಾವಾತ್ ॥

"ಕಪಿಕೇಶಃ" – ಇತಿ ತು ಬಹುವ್ರೀಹೌ ಲೋಕೇ ಪೂರ್ವಪದಸ್ವರಪ್ರಕೃತಿಃ ಅವಶಿಷ್ಟಾ ।

ಲೋಕದಲ್ಲಿ ಬಹುವ್ರೀಹಿಸಮಾಸದಲ್ಲಿ ಪೂರ್ವಪದಸ್ವರವು ಅವಶಿಷ್ಟವಾಗಿರುವುದರಿಂದ "ಹರಿಕೇಶಃ" ಎಂಬ ರೂಪವು ಸಿದ್ಧವಾಗುತ್ತದೆ.

"ಹರಿಕೇಶಃ" ಎಂಬಲ್ಲಿಯೂ ಲೋಕವಾಗಿರುವುದರಿಂದ ಪೂರ್ವಪದ ಪ್ರಕೃತಿಸ್ವರವು ಅವಶಿಷ್ಟವಾಗಿದೆ.

* * *

**ಸೂತ್ರ ೭೪ : ನ್ಯಙ್ಸ್ವರೌ ಸ್ವರಿತೌ (೪.೬)**

**ಸೂತ್ರಾರ್ಥಃ** – ನ್ಯಙ್–ಸ್ವರ್ ಇತಿಪ್ರಾತಿಪದಿಕೌ ಸ್ವರಿತೌ ಭವತಃ ।

**ಸೂತ್ರಾರ್ಥ** – ನ್ಯಙ್ ಹಾಗೂ ಸ್ವರ್ ಎಂಬೆರಡು ಪ್ರಾತಿಪದಿಕಗಳು ಸ್ವರಿತವಾಗುತ್ತವೆ. ಉದಾ –

ನ್ಯಙ್ಙುತ್ತಾನಃ । ವ್ಯಚಕ್ಷಯತ್ ಸ್ವಃ ॥ ನ್ಯಙ್ । ಉತ್ತಾನಃ । ವಿ+ ಅಚಕ್ಷ ಯತ್ = ವ್ಯಚಕ್ಷಯತ್ । ಸ್ವಃ ॥

* * *

**ಸೂತ್ರ ೭೫ : ನ್ಯರ್ಬುದವ್ಯಲ್ಕಶಯೋಃ ಆದಿಃ (೪.೭)**

**ಸೂತ್ರಾರ್ಥಃ** – ನ್ಯರ್ಬುದವ್ಯಲ್ಕಶಯೋಃ ಪ್ರಾತಿಪದಿಕಯೋಃ ಆದಿಃ ಸ್ವರಿತೋ ಭವತಿ ।

**ಸೂತ್ರಾರ್ಥ** – ನ್ಯರ್ಬುದ ಹಾಗೂ ವ್ಯಲ್ಕಶ ಈ ಎರಡು ಪ್ರಾತಿಪದಿಕಗಳ ಆದಿವರ್ಣವು ಸ್ವರಿತವಾಗುತ್ತದೆ. ಉದಾ –

ನ್ಯರ್ಬುದಃ । ವ್ಯಲ್ಕಶಃ ॥

**ಸೂತ್ರ ೨೬ : ತಿಲ್ಯಶಿಕ್ಯಕಾಶ್ಮರ್ಯಧಾನ್ಯಕನ್ಯಾರಾಜನ್ಯಮನುಷ್ಯಾಣಾಮ್ ಅಂತಃ (೪.೮)**

**ಸೂತ್ರಾರ್ಥಃ** – ತಿಲ್ಯ–ಶಿಕ್ಯ–ಕಾಶ್ಮರ್ಯ–ಧಾನ್ಯ–ಕನ್ಯಾ–ರಾಜನ್ಯ– ಮನುಷ್ಯಾಣಾಂ ಪ್ರಾತಿಪದಿಕಾನಾಮ್ ಅಂತಃ ಸ್ವರಿತೋ ಭವತಿ ।

**ಸೂತ್ರಾರ್ಥ** – ತಿಲ್ಯ,ಶಿಕ್ಯ,ಕಾಶ್ಮರ್ಯ,ಧಾನ್ಯ,ಕನ್ಯಾ,ರಾಜನ್ಯ ಹಾಗೂ ಮನುಷ್ಯ ಶಬ್ದಗಳು ಅಂತಸ್ವರಿತವನ್ನು ಹೊಂದುತ್ತವೆ. ಉದಾ –

**ತಿಲ್ಯಃ । ಶಿಕ್ಯಃ । ಕಾಶ್ಮರ್ಯಃ । ಧಾನ್ಯಃ । ಕನ್ಯಾ । ರಾಜನ್ಯಃ । ಮನುಷ್ಯಃ ॥**

* * *

**ಸೂತ್ರ ೨೭ : ಬಿಲ್ವಭಕ್ಷ್ಯವೀರ್ಯಾಣಿ ಛಂದಸಿ (೪.೯)**

**ಸೂತ್ರಾರ್ಥಃ** – ವೇದವಿಷಯೇ ಬಿಲ್ವಭಕ್ಷ್ಯವೀರ್ಯಾಣಾಂ ಪ್ರಾತಿಪದಿಕಾನಾಮ್ ಅಂತ್ಯಮ್ ಅಕ್ಷರಂ ಸ್ವರಿತಂ ಭವತಿ ।

**ಸೂತ್ರಾರ್ಥ** – ವೇದವಿಷಯವು ತೋರುವಾಗ ಬಿಲ್ವ, ಭಕ್ಷ್ಯ ಹಾಗೂ ವೀರ್ಯ ಶಬ್ದಗಳು ಅಂತಸ್ವರಿತವನ್ನು ಹೊಂದುತ್ತವೆ. ಉದಾ–

**ಬಿಲ್ವಃ । ಭಕ್ಷ್ಯಮ್ । ವೀರ್ಯಮ್ ॥**

ಲೋಕದಲ್ಲಿ ಉಭಯಸ್ವರವನ್ನು ಹೊಂದುತ್ತದೆ. ಉದಾ –

**ಬಿಲ್ವಃ । ಬಿಲ್ವಃ ॥ ಭಕ್ಷ್ಯಮ್ । ಭಕ್ಷ್ಯಮ್ । ವೀರ್ಯಮ್ । ವೀರ್ಯಮ್ ॥**

* * *

**ಸೂತ್ರ ೨೮ : ತ್ವತ್ ತ್ವ ಸಮ ಸಿಮೇತಿ ಅನುಚ್ಚಾನಿ (೪.೧೦)**

**ಸೂತ್ರಾರ್ಥಃ** – ತ್ವತ್ ತ್ವ ಸಮ ಸಿಮ ಇತ್ಯೇತಾನಿ ಸರ್ವಾನುದಾತ್ತಾನಿ ।

**ಸೂತ್ರಾರ್ಥ** – ತ್ವತ್ ತ್ವ ಸಮ ಸಿಮ ಎಂಬ ಪ್ರಾತಿಪದಿಕಗಳು ಸರ್ವಾನುದಾತ್ತ ವಾಗುತ್ತವೆ. ಉದಾ –

**ತ್ವತ್ । ತ್ವ । ಸಮ । ಸಿಮ ವೇದೋಕ್ತಮ್ ಉದಾಹರಣಮ್ – ಸ್ತರೀರು ತ್ವತ್**

(೭.೧೦೧.೩) ಉತ ತ್ವಃ ಪಶ್ಯನ್ (೧.೭೧.೪) ನಭಂತಾ ಮನ್ಯಕೇ ಸಮೇ। ಸಿಮಸ್ಮೈ॥

* * *

**ಸೂತ್ರ ೫೯ : ಸಿಮಸ್ಯ ಆಥರ್ವಣೇऽಂತ ಉದಾತ್ತಃ (೪.೧೧)**

**ಸೂತ್ರಾರ್ಥ:** – ಅಥರ್ವವೇದವಿಷಯೇ ಸಿಮಸ್ಯ ಪ್ರಾತಿಪದಿಕಸ್ಯ ಅಂತ ಉದಾತ್ತೋ ಭವತಿ ।

**ಸೂತ್ರಾರ್ಥ** – ಅಥರ್ವವೇದವಿಷಯದಲ್ಲಿ "ಸಿಮ" ಎಂಬ ಪ್ರಾತಿಪದಿಕಕ್ಕೆ ಅಂತ ಉದಾತ್ತವು ಬರುತ್ತದೆ. ಅಥರ್ವವೇದೇ ಎಂಬುವುದು ಪ್ರಾಯಃ ಎಂಬರ್ಥವನ್ನು ಹೊಂದಿದೆ. ಉದಾ–

ಸಿಮಸ್ಮೈ ॥ (ಋ. ೧೧೫.೧)

* * *

**ಸೂತ್ರ ೬೦ : ನಿಪಾತಾ ಆದ್ಯುದಾತ್ತಾಃ (೪.೧೨)**

**ಸೂತ್ರಾರ್ಥ:** – ನಿಪಾತಾ ಆದ್ಯುದಾತ್ತಾ ಭವಂತಿ ।

**ಸೂತ್ರಾರ್ಥ** – ನಿಪಾತಗಳು ಆದ್ಯುದಾತ್ತವಾಗುತ್ತವೆ. ಪಾಣಿನಿ "ಪ್ರಾಗೀಶ್ವರಾತ್ ನಿಪಾತಾಃ" (ಪಾ.ಸೂ.೧.೪.೫೬) ಉದಾ–

ಉರೀ । ಉರರೀ । ಸಾಕ್ಷಾತ್ । ಸ್ವಾಹಾ ॥

ಯದ್ಯಪಿ 'ಶುಕ್ಲ' ಶಬ್ದವು ನಿಪಾತವಾಗಿದೆ. ಆದರೆ 'ಚ್ವಿ' ಪ್ರತ್ಯಯಾಂತಶಬ್ದವು ಅಂತೋದಾತ್ತವಾಗುತ್ತದೆ ಎಂದಿರುವುದರಿಂದ ಅಂತೋದಾತ್ತವಾಗುತ್ತದೆ. ಉದಾ–

ಶುಕ್ಲೀಕರೋತಿ ॥

* * *

**ಸೂತ್ರ ೬೧ : ಉಪಸರ್ಗಾಶ್ಚಾऽಭಿವರ್ಜಮ್ ಆದ್ಯುದಾತ್ತಾಃ(೪.೧೩)**

**ಸೂತ್ರಾರ್ಥ:** – 'ಅಭಿ' ಶಬ್ದಂ ವರ್ಜಯಿತ್ವಾ ಉಪಸರ್ಗಸಂಜ್ಞಕಾನಿ ಪ್ರಾತಿಪದಿಕಾನಿ ಆದ್ಯುದಾತ್ತಾನಿ ಭವಂತಿ ।

**ಸೂತ್ರಾರ್ಥ** – 'ಅಭಿ' ಎಂಬ ಉಪಸರ್ಗವನ್ನು ಬಿಟ್ಟು ಉಳಿದೆಲ್ಲಾ ಉಪಸರ್ಗಗಳೂ ಆದ್ಯುದಾತ್ತವಾಗುತ್ತವೆ. ಉದಾ–

ಪ್ರ । ಪರಾ । ಅಪ । ಸಂ । ಅನು । ಅವ । ನಿಸ್ । ನಿರ್ । ದುಸ್ । ದುರ್ । ಏ ।
ಆಜ್ । ನಿ । ಅಧಿ । ಅಪಿ । ಅತಿ । ಸು । ಉತ್ । ಪ್ರತಿ । ಪರಿ । ಉಪ ॥ ಅಭಿ ॥

* * *

**ಸೂತ್ರ ೮೨ : ಏವಾದೀನಾಮ್ ಅಂತಃ ( ೪.೧೪)**

**ಸೂತ್ರಾರ್ಥಃ** – ಏವಾದೀನಾಂ ಪ್ರಾತಿಪದಿಕಾನಾಮ್ ಅಂತ ಉದಾತ್ತೋ ಭವತಿ ।

**ಸೂತ್ರಾರ್ಥ** – "ಏವ" ಮೊದಲಾದ ಪ್ರಾತಿಪದಿಕಗಳು ಅಂತೋದಾತ್ತವಾಗುತ್ತವೆ. ಉದಾ–

ಏವ । ಏವಮ್ । ನೂನಮ್ ॥

ಏವಾದೀನಾಮ್ ಅಂತೋದಾತ್ತ ಸೂತ್ರದಿಂದ ಅಂತೋದಾತ್ತ ಪ್ರಾಪ್ತವಾಗುತ್ತಿರುವಾಗ–

**ಆದಹ ಸ್ವಧಾಮನು ಪುನರ್ಗರ್ಭತ್ವಮೇರಿರೇ ॥ ಶಶ್ವದಿಂದ್ರಃ** ..ಇತ್ಯಾದಿ ಸ್ಥಳಗಳಲ್ಲಿ ಏವಾದಿಶಬ್ದಸಮೂಹದಲ್ಲಿ ಸೇರಿದ **ಅಹ । ಶಶ್ವತ್ ।**

ಮೊದಲಾದಶಬ್ದಗಳು ಆದ್ಯುದಾತ್ತವಾಗಿ ದೊರಕುತ್ತಿವೆಯಷ್ಟೆ: ಎಂದರೆ ಹೌದು, ಏವಾದಿಗಣದಲ್ಲಿದ್ದರೂ 'ನಿಪಾತಾ ಆದ್ಯುದಾತ್ತಾಃ' ಎಂಬುವುದರಿಂದ ಆದ್ಯುದಾತ್ತ ಬಂದಿದೆ ಎಂದು ತಿಳಿಯಬೇಕು. ಅಥವಾ ಏವಾದಿ ಗಣದಲ್ಲಿ **"ಅಹ"** ಹಾಗೂ **"ಶಶ್ವತ್"** ಶಬ್ದಗಳು ಆದ್ಯುದಾತ್ತವಾಗಿ ಪಠಿತವಾಗಿವೆಯೆಂದು ತಿಳಿಯಬೇಕು.

* * *

**ಸೂತ್ರ ೮೩ : ವಾವಾದೀನಾಮ್ ಉಭೌ ಉದಾತ್ತೌ (೪.೧೫)**

**ಸೂತ್ರಾರ್ಥಃ** – ವಾವಾದೀನಾಂ ಪ್ರಾತಿಪದಿಕಾನಾಮ್ ಉಭೌ ಉದಾತ್ತೌ ಭವತಃ ।

**ಸೂತ್ರಾರ್ಥ** – ವಾವ ಮೊದಲಾದ ಪ್ರಾತಿಪದಿಕಗಳು ದ್ವ್ಯುದಾತ್ತವಾಗುತ್ತವೆ ಎಂದು ತಿಳಿಯಬೇಕು. ಉದಾ–

ವಾವ । ಸೂತ್ರದಲ್ಲಿ ಉಭೌ ಎಂದಿರುವುದು "ಅನುದಾತ್ತಂ ಪದಮೇಕ ವರ್ಜಮ್" ಸೂತ್ರದ ಬಾಧೆಗಾಗಿ ಎಂದು ತಿಳಿಯಬೇಕು.

* * *

**ಸೂತ್ರ ೮೪ : ಚಾದಯೋಽನುದಾತ್ತಾಃ (೪.೧೫)**

**ಸೂತ್ರಾರ್ಥಃ** – ಚಾದಯಃ ಶಬ್ದಾಃ ಅನುದಾತ್ತಾಃ ಭವಂತಿ । ಚ । ವಾ । ಹ॥

ಆಹ ಇಲ್ಲಿ **"ನಿಪಾತಾ ಆದ್ಯುದಾತ್ತಾ ಅಭಿವರ್ಜವಮ್"** ಎಂಬುವುದಾಗಿ ಆದ್ಯುದಾತ್ತತ್ವವು.

* * *

**ಸೂತ್ರ ೮೫ : ಯಥೇತಿ ಪಾದಾಂತೇ ( ೪.೧೭)**

**ಸೂತ್ರಾರ್ಥಃ** – ಪಾದಾಂತೇ ಯಥಾ ಇತಿ ಪ್ರಾತಿಪದಿಕಮ್ ಅನುದಾತ್ತಂ ಭವತಿ।

**ಸೂತ್ರಾರ್ಥ** – ಪಾದಾಂತ್ಯದಲ್ಲಿರುವ "ಯಥಾ" ಶಬ್ದವು ಸರ್ವಾನುದಾತ್ತ ವಾಗುತ್ತವೆಯೆಂದು ತಿಳಿಯಬೇಕು. ಉದಾ–

**ತಂ ನೇಮಿಮೃಭವೋ ಯಥಾ । ಪಾದಾಂತೇ ಇತಿ ಕಿಮ್?" ಯಥಾ ಪೂರ್ವೇಭ್ಯೋ ಜರಿತೃಭ್ಯ ಇಂದ್ರ"** ॥

ಪಾದಾದಿಯಲ್ಲಿ ಆದ್ಯುದಾತ್ತವಾಗಿದೆ.

* * *

**ಸೂತ್ರ ೮೬ : ಪ್ರಕಾರಾದಿದ್ವಿರುಕ್ತೌ ಪರಸ್ಯ ಅಂತ ಉದಾತ್ತಃ (೪.೧೮)**

**ಸೂತ್ರಾರ್ಥಃ** – "ಪ್ರಕಾರೇ ಗುಣವಚನಃ" ಇತ್ಯಾದಿ ದ್ವಿತ್ವೇ ಯತ್ಪರಂ ತಸ್ಯ ಅಂತ ಉದಾತ್ತೋ ಭವತಿ.

**ಸೂತ್ರಾರ್ಥ** – **"ಪ್ರಕಾರೇ ಗುಣವಚನಸ್ಯ"** (ಪಾ.ಸೂ.೮.೧.೧೨) ಎಂಬ ಸೂತ್ರದಲ್ಲಿ ಪಾಣಿನಿಯು ಪ್ರಕಾರಾರ್ಥದಲ್ಲಿ ಬರುವ ಗುಣವಾಚಕಶಬ್ದವು ದ್ವಿತ್ವವನ್ನು ಹೊಂದುತ್ತದೆಯೆಂದಿದ್ದಾನೆ. ಇದನ್ನು ಕರ್ಮಧಾರಯ ಸಮಾಸದಂತೆಯೆಂದಿದ್ದಾನೆ. ಸದೃಶವಾದ ಈ ಎರಡು ಶಬ್ದಗಳಲ್ಲಿ ಎರಡನೆಯ ಶಬ್ದದ ಅಂತ್ಯವರ್ಣವು ಉದಾತ್ತವೆಂದು ತಿಳಿಯಬೇಕು. **ಉದಾ–**

**ಪಟು ಪಟುಃ । ಮೃದು ಮೃದು । ಪಂಡಿತ ಪಂಡಿತಃ ॥**

ಇತ್ಯಾದಿ ॥ ಉಳಿದೆಲ್ಲಾ ಅಕ್ಷರಗಳೂ ಅನುದಾತ್ತವೆಂದು ತಿಳಿಯಬೇಕು.

* * *

## ಸೂತ್ರ ೮೭ : ಶೇಷಂ ಸರ್ವಮ್ ಅನುದಾತ್ತಮ್ (೪.೧೯)

**ಸೂತ್ರಾರ್ಥಃ** – ಪ್ರಕಾರಾದಿ ದ್ವಿರುಕ್ತಾತ್ ಅನ್ಯತ್ ಯತ್ ದ್ವಿರುಕ್ತಂ ತತ್ರ ಸರ್ವಮ್ ಅನುದಾತ್ತಂ ಭವತಿ.

**ಸೂತ್ರಾರ್ಥ** – ಪ್ರಕಾರಾದಿ ದ್ವಿರುಕ್ತಭಿನ್ನವಾದ ದ್ವಿರುಕ್ತಶಬ್ದಗಳಲ್ಲಿ ಎಲ್ಲವೂ ಅನುದಾತ್ತವಾಗುತ್ತವೆ. **ಉದಾ** –

**ಪಚತಿ ಪಚತಿ ॥ ಜಲ್ಪತಿ ಜಲ್ಪತಿ ॥ ಗ್ರಾಮೋಗ್ರಾಮೋ ರಮಣೀಯಃ ॥**

ಇಲ್ಲಿ " **ನಿತ್ಯವೀಪ್ಸಯೋಃ**" ( ಪಾ.೮.೧೪) ಎಂಬ ಸೂತ್ರದಿಂದ ದ್ವಿರುಕ್ತಿ ಬಂದಿದೆ.

**ವಿಶೇಷ** – ಪಾಣಿನೀಯ ಸ್ವರಸೂತ್ರಗಳಲ್ಲಿ "ಅನುದಾತ್ತಂ ಚ" (೮/೧/೩) ಎಂಬ ಸೂತ್ರವು ಈ ವಿಷಯವನ್ನು ಮತ್ತೊಂದು ರೀತಿಯಿಂದ ಹೇಳುತ್ತದೆ. ದ್ವಿರುಕ್ತ ಶಬ್ದಗಳಲ್ಲಿ ಎರಡನೆಯ ಶಬ್ದವು ಸರ್ವಾನುದಾತ್ತವಾಗುತ್ತದೆ ಎಂಬುವುದಾಗಿ ಸೂತ್ರಾರ್ಥ. ವೇದಮಂತ್ರಗಳಲ್ಲಿ ಈ ಸೂತ್ರವು ವೇದಮಂತ್ರಗಳಲ್ಲಿ ಚೆನ್ನಾಗಿ ಅನ್ವಯಿಸುತ್ತದೆ. ಉದಾಹರಣೆಗೆ –

**ದಿವೇಽದಿವೇ", "ವ್ರಾತಂ ವ್ರಾತಂ", "ಗಣಂ ಗಣಂ"**

ಇತ್ಯಾದಿ ಕಡೆಗಳಲ್ಲಿ ಅನ್ವಯಿಸುತ್ತದೆ .

॥ ಹರಿಃ ಓಂ ಹರಿಃಓಂ ॥

**ಶ್ರೀಕೃಷ್ಣಾರ್ಪಣಮಸ್ತು**

* * *

**(ವೈದಿಕಸ್ವರಪ್ರವೇಶ)**

# ಅಥ ವೈದಿಕಾಕ್ಷರ–ಸಂಧಿ–ಸ್ವರವಿಚಾರಾಃ

ವೇದಮೂಲವಾದ ಧರ್ಮವೇ ನಮ್ಮ ದೇಶದ ಮೂಲಧರ್ಮ. ವೇದಮೂಲ ಹಾಗೂ ವೇದಾವಿರುದ್ಧವಲ್ಲದ ದೇಶ, ದೇಹ ಹಾಗೂ ಆತ್ಮಹಿತಕ್ಕೆ ಕಾರಣವಾದ ಭಗವಂತನ ಸೇವೆಯೇ ಧರ್ಮ, ತದ್ವಿರುದ್ಧವೆಲ್ಲವೂ ಅಧರ್ಮ. ಅದನ್ನು ಬೆಳೆಯ ಗೊಟ್ಟರೆ ಸರ್ವನಾಶ ಖಂಡಿತ. ಇಂತಹ ಧರ್ಮವು ಪರಮಸತ್ಯವೂ ನಿತ್ಯವೂ ಪ್ರಕೃತಿಗೆ ಪೂರಕವೂ ಆಗಿದ್ದುಅಪೌರುಷೇಯವೂ ಭಗವಂತನ ಆಜ್ಞಾರೂಪವೂ ಆಗಿದೆ. ಇದರ ಅಧ್ಯಯನವು ಬ್ರಾಹ್ಮಣರಿಗೆ ಶ್ರೇಯಸ್ಕರವೂ ಜ್ಞಾನಭಕ್ತಿಮುಕ್ತಿಪ್ರದವೂ ಆಗಿದೆ. ಗುರುಮುಖೇನ ಹಾಗೂ ನಿರಂತರ ಅಧ್ಯಯನದಿಂದ ಮಾತ್ರ ಇದರ ಅಧ್ಯಯನವು ಪರಿಪೂರ್ಣವೂ ಫಲದಾಯಕವೂ ಆಗುವುದು.

## ೧. ಪಂಚ ವಿಧ ವೇದಾಧ್ಯಯನ

**ವೇದಸ್ವೀಕರಣಂ ಪೂರ್ವಂ ವಿಚಾರೋಽಭ್ಯಸನಂ ಜಪಃ ।**
**ತದ್ದಾನಂ ಚೈವ ಶಿಷ್ಯೇಭ್ಯೋ ವೇದಾಭ್ಯಾಸೋ ಹಿ ಪಂಚಧಾ ॥** (ದ.ಸ್ಮೃ)

೧. ಗುರುಕುಲಕ್ಕೆ ಹೋಗಿ ಗುರುಮುಖದಿಂದಲೇ ಪರಂಪರಾಗತವಾದ ರೀತಿಯಲ್ಲಿ ವೇದಾಧ್ಯಯನ.

೨. ಲಕ್ಷಣವಿಚಾರ ಹಾಗೂ ಅರ್ಥಜ್ಞಾನಾತ್ಮಕವಾದ ವಿಚಾರ.

೩. ಅಭ್ಯಾಸ

೪. ಜಪ

೫. ದಾನ (ವೇದಪಾಠ)

–ಈ ಐದು ವಿಧವಾದ ವೇದಾಧ್ಯಯನವು ವೇದಾಧ್ಯಾಯಿಗಳ ಕರ್ತವ್ಯವಾಗಿದೆ.

* * *

ವೇದಪಾಠವು ಅಕ್ಷರಪರಿಚಯ, ಅಕ್ಷರಸಂಧಿಪರಿಚಯ, ಸ್ವರಪರಿಚಯ, ಸಂಧಿಸ್ವರ ಪರಿಚಯಶಬ್ದ, ಸ್ವರಪರಿಚಯ ಹಾಗೂ ಪ್ರಕೃತಿ ಹಾಗೂ ವಿಕೃತಿಪಾಠಗಳಿಂದ ಪರಿಪೂರ್ಣತೆಯನ್ನು ಹೊಂದಬಹುದೆಂದು ತಿಳಿದವರ ಅಭಿಪ್ರಾಯ.

* * *

## ೨. ವೇದಮಂತ್ರಲಕ್ಷಣ

**ಸ್ವರೋ ವರ್ಣೋಽಕ್ಷರಂ ಮಾತ್ರಾ ದೈವಂ ಯೋಗಾರ್ಷಮೇವ ಚ ।**
**ಮಂತ್ರಂ ಜಿಜ್ಞಾಸ್ಯಮಾನೇನ ವೇದಿತವ್ಯಂ ಪದೇ ಪದೇ ॥**

ಮಂತ್ರಲಕ್ಷಣವನ್ನು ತಿಳಿಯಬಯಸುವವನು ಆ ಮಂತ್ರದ "ಋಷಿ, ಛಂದಸ್ಸು, ದೇವತೆ ವಿನಿಯೋಗ, ವರ್ಣ, ಅಕ್ಷರ, ಸ್ವರ, ಮಾತ್ರಾಕಾಲ ಇವುಗಳನ್ನು ಸರಿಯಾಗಿ ತಿಳಿಯಬೇಕು.

ಕಾತ್ಯಾಯನಾನುಕ್ರಮಣಿಕೆಯಲ್ಲಿ ಹೇಳಿದ ಪ್ರಕಾರ "ಯಸ್ಯ ವಾಕ್ಯಂ ಸ ಋಷಿಃ", "ಯದಕ್ಷರಪರಿಮಾಣಂ ತಚ್ಛಂದಃ", "ಯಾ ತೇನೋಚ್ಯತೇ ಸಾ ದೇವತಾ" ಎಂಬುವುದಾಗಿ ಋಷಿ ಛಂದಸ್ಸು ದೇವತೆಗಳ ಬಗ್ಗೆ ಹೇಳಿದ್ದಾರೆ.

* * *

## ೩. ಸ್ವರಗಳು

ಮೂಲಸ್ವರಗಳು ಒಟ್ಟು ಮೂರೇ ಇರುವುದು. ಅವೆಂದರೆ–

**ಉದಾತ್ತಶ್ಚಾನುದಾತ್ತಶ್ಚ ಸ್ವರಿತಶ್ಚ ಸ್ವರಾಸ್ತ್ರಯಃ ॥ ೧೧ ॥** (ಪಾ.ಶಿ)

೧. ಉದಾತ್ತ, ೨. ಅನುದಾತ್ತ, ೩. ಸ್ವರಿತ.

ಉದಾತ್ತಾದ್ಯುಚ್ಚಾರಣಕ್ರಮ

**ಆಯಾಮ – ವಿಶ್ರಂಭ – ಆಕ್ಷೇಪೈಸ್ತ ಉಚ್ಯಂತೇ ॥** (ಪ್ರಾ. ಶಾ. ೪/೧)

* * *

ಅ – ಉದಾತ್ತ – ಉಚ್ಚಾರಣಾವಯವಗಳ ಮೇಲ್ಭಾಗದಿಂದ ಉಚ್ಚರಿಸಲ್ಪಡುವ ಸ್ವರ.

ಪ್ರಾತಿಶಾಖ್ಯದಲ್ಲಿ ಹೇಳುವಂತೆ ವಾಯುನಿಮಿತ್ತ ಉಚ್ಚಾರಣಾವಯವಗಳ ಊರ್ಧ್ವಗಮನ(ಆಯಾಮ)ದಿಂದ ಉತ್ಪನ್ನವಾಗುವ ಸ್ವರ ಉದಾತ್ತಸ್ವರ. ವೇದದಲ್ಲಿ ಯಾವುದೇ ಚಿಹ್ನೆಯಿಲ್ಲದ ಅಕ್ಷರವು ಉದಾತ್ತ. ಅಂದರೆ ಮಂತ್ರಾರಂಭದಲ್ಲಿ ಚಿಹ್ನೆಯಿರದ ಅಕ್ಷರ. ಮಂತ್ರಮಧ್ಯದಲ್ಲಿ ಅನುದಾತ್ತದ ಬಳಿಕ ಅಥವಾ ಸ್ವರಿತದ ಹಿಂದಿನ ಚಿಹ್ನಯಿಲ್ಲದ ವರ್ಣವು ಉದಾತ್ತವೆಂದು ತಿಳಿಯಬೇಕು. ಎರಡು ಲಕ್ಷಣಗಳಿಗೂ ಉದಾಹರಣೆ–

ಅಗ್ನೇ ನಯ ॥

ಇದು ಎರಡುವಿಧ- ೧. ಉದಾತ್ತ. ಉದಾ- **ವಾಯವಾಯಾಹಿ** ।

ಆ – ಉದಾತ್ತತರ – ಸ್ವರಿತದಲ್ಲಿ ಪೂರ್ವೋತ್ತರಭಾಗವಿದ್ದು ಪೂರ್ವಭಾಗವು ಉದಾತ್ತವೂ ಉತ್ತರಭಾಗವು ಉದಾತ್ತತರವೂ ಆಗಿದೆ.

ಉದಾ- **ಆ ಯಾಹಿ** । ಯಕಾರೋತ್ತರ ಆಕಾರವನ್ನು ಉಚ್ಚರಿಸುವಾಗ ಉದಾತ್ತದಿಂದ ಆರಂಭಿಸಿ ಉದಾತ್ತತರದಲ್ಲಿ ಉಚ್ಚರಿಸಬೇಕು. ಇದನ್ನೇ ಪ್ರಾತಿಶಾಖ್ಯ ದಲ್ಲಿ "ಅನುದಾತ್ತಃ ಪರಃ ಶೇಷಃ ಸ ಉದಾತ್ತಶ್ರುತಿರ್ನಚೇತ್" ಎಂಬಲ್ಲಿ ಹೇಳಿದ್ದಾರೆ. ಆ ಸೂತ್ರದಲ್ಲಿ ಜಾತ್ಯಾದಿಸ್ವರಿತವನ್ನು ಪರದಲ್ಲಿ ಉದಾತ್ತ ಅಥವಾ ಸ್ವರಿತವಿರುವಾಗ ಉದಾತ್ತಾನುದಾತ್ತಸ್ವರಗಳಿಂದ ಯುಕ್ತವಾಗಿಯೇ ಉಚ್ಚರಿಸಬೇಕು. ಸ್ವರಿತದ ಪರದಲ್ಲಿ ಉದಾತ್ತಸ್ವರಿತಗಳಿಲ್ಲದಿದ್ದರೆ ಅಥವಾ ಅನುದಾತ್ತವಿದ್ದರೆ ಅಥವಾ ಯಾವುದೇ ವರ್ಣವಿಲ್ಲದಿದ್ದರೆ ಪೂರ್ವಾರ್ಧವನ್ನು ಉದಾತ್ತವಾಗಿಯೂ ಉತ್ತರಾರ್ಧವನ್ನು ಉದಾತ್ತತರದಲ್ಲಿಯೂ ಉಚ್ಚರಿಸಬೇಕೆನ್ನುತ್ತಾರೆ.

**"ಅಗ್ನ ಆಯಾಹಿ"** ಎಂಬಲ್ಲಿನ ಸ್ವರಿತ(ಯಾ)ದ ಮುಂದೆ "ಹಿ" ಎಂಬ ಅನುದಾತ್ತವೇ ಇರುವುದರಿಂದ ಉದಾತ್ತದಿಂದ ಉದಾತ್ತತರದಲ್ಲಿ ಉಚ್ಚರಿಸ ಬೇಕು.

* * *

೨ – ಅನುದಾತ್ತ – ವಾಯುನಿಮಿತ್ತ ಉಚ್ಚಾರಣಾವಯವಗಳ ಅಧೋಗಮನ (ವಿಶ್ರಂಭ)ದಿಂದ ಉಂಟಾಗುವ ಸ್ವರವೇ ಅನುದಾತ್ತ. ಅಕ್ಷರದ ಕೆಳಗೆ ಅಡ್ಡಗೆರೆಯಿಂದ ಅನುದಾತ್ತವನ್ನು ತೋರಿಸುತ್ತಾರೆ. ಉದಾ–

**"ಅ"ಗ್ನಿಮೀಳೇ "ಪು"ರೋಹಿತಮ್** ।

ಅನುದಾತ್ತವೂ ಎರಡು ವಿಧ– ೧. ಅನುದಾತ್ತ, ೨. ಅನುದಾತ್ತತರ.

ಉದಾತ್ತ ಅಥವಾ ಸ್ವರಿತಪೂರ್ವದ ಅನುದಾತ್ತವೇ ಅನುದಾತ್ತತರ.

೧. ಉದಾತ್ತಪರಾನುದಾತ್ತತರಕ್ಕೆ ಉದಾಹರಣೆ –

**ಅಮಿ"ತ್ರ"ಹಾ ವೃತ್ರಹಾ ದಸ್ಯುಹಾ ಚ**......... ।

೨. ಸ್ವರಿತಪರಾನುದಾತ್ತತರಕ್ಕೆ ಉದಾಹರಣೆ –

**ಉಪೇಂದ್ರ ತವ "ವೀ"ರ್ಯೇ** ॥

* * *

೩. ಸ್ವರಿತ – ವಾಯುನಿಮಿತ್ತ ಉಚ್ಚಾರಣಾವಯವಗಳ ತಿರ್ಯಗ್ಗಮನದಿಂದ ಉತ್ಪನ್ನವಾಗುವ ಸ್ವರವೇ ಸ್ವರಿತಸ್ವರ. ಅಂದರೆ ಉಚ್ಚಾರಣಾವಯವಗಳ ಊರ್ಧ್ವ ಗಮನ ಹಾಗೂ ಅಧೋಗಮನದಿಂದ ಸ್ವರಿತಸ್ವರವು ಉತ್ಪನ್ನವಾಗುತ್ತದೆ. ಇದನ್ನೇ ಪಾಣಿನೀಯವ್ಯಾಕರಣಸೂತ್ರವು "ಸಮಾಹಾರಃ ಸ್ವರಿತಃ" ಎಂದಿದೆ. ಉಚ್ಚಾರಣಾವ ಯವಗಳ ಊರ್ಧ್ವಾಧೋಗಮನದಿಂದ ಉತ್ಪನ್ನವಾಗುವ ಸ್ವರವೇ ಸ್ವರಿತಸ್ವರವಾಗಿದೆ.

* * *

ಸ್ವರಿತಸ್ವರವು ಮೂರುವಿಧ– ೧. ಪ್ರಾತಿಹತಸ್ವರಿತ, ೨. ಸಂಧಿಸ್ವರಿತ, ೩. ಜಾತ್ಯಸ್ವರಿತ.

* * *

೧. ಪ್ರಾತಿಹತಸ್ವರಿತ– ಉದಾತ್ತಾನಂತರದ ಅನುದಾತ್ತವು ಅದರ ಮುಂದೆ ಉದಾತ್ತ ಅಥವಾ ಸ್ವರಿತವಿಲ್ಲದಿದ್ದರೆ ಸ್ವರಿತವಾಗುತ್ತದೆ. ಇದನ್ನು ಪ್ರಾತಿಹತಸ್ವರಿತವೆಂದು ತಿಳಿಯಬೇಕು. ಉದಾ–

**ತತ್ ಸವಿತುಃ = ತತ್ಸವಿತುಃ ।**

ಮುಂದೆ ಉದಾತ್ತವಿಲ್ಲದಿರುವಾಗ ಎಂದೇಕೆ ಹೇಳಬೇಕು?

**ಪ್ರ ಯ ಆರುಃ ।**

ಇಲ್ಲಿ ಉದಾತ್ತವಿರುವುದರಿಂದ ಅನುದಾತ್ತವು ಸ್ವರಿತವಾಗಿಲ್ಲ.

ಮುಂದೆ ಸ್ವರಿತವಿಲ್ಲದಿರುವಾಗವೆಂದೇಕೆ ಹೇಳಬೇಕು?

**ಸಮುದ್ರೇ ಹೃದ್ಯಂತರಾಯುಷಿ ॥ = "ದ್ರೇ – ಹೃ – ದ್ಯಂ".**

ಇಲ್ಲಿ ಉದಾತ್ತದ ಮುಂದಿರುವ ಅನುದಾತ್ತವು ಅದರ ಮುಂದೆ ಕ್ಷೈಪ್ರಸ್ವರಿತ ವಿರುವುದರಿಂದ ಸ್ವರಿತವಾಗುವುದಿಲ್ಲ.

* * *

೨. ಸಂಧಿಸ್ವರಿತ ಮೂರುವಿಧ– ೧. ಪ್ರಶ್ಲಿಷ್ಟಸ್ವರಿತ ೨. ಅಭಿನಿಹಿತಸ್ವರಿತ ೩. ಕ್ಷೈಪ್ರಸ್ವರಿತ.

* * *

ಅ – ಪ್ರಶ್ಲಿಷ್ಟಸ್ವರಿತ– ಉದಾತ್ತಾನುದಾತ್ತಹ್ರಸ್ವ ಇಕಾರಗಳು ಹಿಂದೆ ಮುಂದೆ

ಇರುವಾಗ ಎರಡೂ ವರ್ಣಗಳ ಸ್ಥಾನದಲ್ಲಿ ಬರುವ ದೀರ್ಘಾದೇಶವು ಸ್ವರಿತವಾಗುತ್ತದೆ.

= ಇ + ಇ = ಈ

ಉದಾ –

ದಿವಿ ಇವ = ದಿವೀವ ....... । (ಋಕ್. ೧. ೨)

ಆದರೆ ಕೃಷ್ಣಯಜುರ್ವೇದದಲ್ಲಿ ಉದಾತ್ತಾನುದಾತ್ತ ಹ್ರಸ್ವ ಉಕಾರಗಳ ನಡುವೆ ಪ್ರಶ್ಲಿಷ್ಟ ಸಂಧಿಯಾಗುವಾಗ ಬರುವ ದೀರ್ಘವು ಮಾತ್ರ ಸ್ವರಿತವಾಗುತ್ತದೆ.

ಉ+ಉ=ಊ ॥

ಪ್ರತ್ಯುದಾಹರಣೆ –

ದಿವಿ+ಇವ=ದಿವೀವ ಚಕ್ಷುರಾತತಮ್ ॥ = ಇ+ಇ = ಈ

ಯಜುರ್ಮಂತ್ರದಲ್ಲಿ ಉದಾತ್ತಾನುದಾತ್ತ ಹ್ರಸ್ವ ಇಕಾರಗಳ ನಡುವೆ ಪ್ರಶ್ಲಿಷ್ಟ ಸಂಧಿಯಾಗುವಾಗ ಸ್ವರಿತಸ್ವರವು ಬಾರದೆ ಸಾಮಾನ್ಯ ನಿಯಮದಂತೆ ಉದಾತ್ತಸ್ವರವೇ ಬರುತ್ತದೆ.

* * *

೬ – ಅಭಿನಿಹಿತಸ್ವರಿತ = ಪೂರ್ವರೂಪಸಂಧಿಯನ್ನು ಪ್ರಾತಿಶಾಖ್ಯದಲ್ಲಿ ಅಭಿನಿಹಿತಸಂಧಿಯೆನ್ನುವರು. ಉದಾತ್ತ "ಏ" ಕಾರ ಅಥವಾ "ಓ" ಕಾರಗಳ ಮುಂದೆ ಅನುದಾತ್ತ ಹ್ರಸ್ವ "ಅ"ಕಾರವಿರುವಾಗ ಸಂಧಿಜವರ್ಣವು ಸ್ವರಿತವಾಗುತ್ತದೆ.

ಅಂದರೆ ಉದಾತ್ತ ಏಕಾರ, ಓಕಾರಗಳು ಸ್ವರಿತವಾಗುತ್ತವೆ ಎಂದರ್ಥ. ಮುಂದಿನ ವರ್ಣವು ಲೋಪವಾಗುತ್ತದೆ. ಇದನ್ನು ಪಾಣಿನೀಯರು "ऽ" ಚಿಹ್ನೆಯಿಂದ ಗುರುತಿಸುತ್ತಾರೆ.

ಉದಾಹರಣೆಗಳು –

೧. ಏ + ಅ = ಏ

೨. ಓ + ಅ = ಓ

ಉದಾ – ಗೃಣಾನೋಽಸ್ಮಾಕಮ್ ॥

* * *

೨ – ಕ್ಷೈಪ್ರಸ್ವರಿತ – ಕ್ಷಿಪ್ರಸಂಧಿ ಎಂದರೆ ಯಣ್ ಸಂಧಿಯೆಂದರ್ಥ. ಉದಾತ್ತಾನುದಾತ್ತಗಳುಸಂಧಿಸುವ ಈ ಸಂಧಿಯಲ್ಲಿ ಆಗುವ ಸ್ವರಿತವನ್ನು ಕ್ಷೈಪ್ರಸ್ವರಿತ ವೆನ್ನುವರು. ಕ್ಷಿಪ್ರಸಂಧಿಯಲ್ಲಿ ಪೂರ್ವಾಕ್ಷರವು ಉದಾತ್ತವಾಗಿದ್ದು ಅಸವರ್ಣವಾದ ಉತ್ತರಾಕ್ಷರವು ಅನುದಾತ್ತವಾಗಿದ್ದು ಉದಾತ್ತವರ್ಣದ ಸ್ಥಾನದಲ್ಲಿ ಯಣ್ ಆದೇಶವು ಬರುವುದು ಅದರ ಪರದಲ್ಲಿನ ಅನುದಾತ್ತವು ಸ್ವರಿತವಾಗುವುದು. ಇದನ್ನೇ ಪಾಣಿನೀಯಸೂತ್ರವು "ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ" ಎಂದು ವಿವರಿಸಿದೆ.

"ಯಣ್‌ಸಂಧಿಯನ್ನು ವಿಧಿಸುವ ಪಾಣಿನೀಯಸೂತ್ರ – "ಇಕೋ ಯಣ್ ಅಚಿ" ಇಕ್ ಪ್ರತ್ಯಾಹಾರದಲ್ಲಿರುವ ವರ್ಣಗಳಿಗೆ ಅಸವರ್ಣಸ್ವರಾಕ್ಷರವು ಮುಂದಿರು ವಾಗ ಯಣ್ ಪ್ರತ್ಯಾಹಾರದಲ್ಲಿನ ವರ್ಣಗಳು ಆದೇಶವಾಗಿ ಬರುತ್ತವೆ ಎಂದು ಸೂತ್ರಾರ್ಥ".

ಕ್ಷೈಪ್ರಸ್ವರಿತಕ್ಕೆ ಅಕ್ಷರಗಳಲ್ಲಿ ಕೆಲವು ಉದಾಹರಣೆಗಳು–

**ಇ + ಅ = ಯ ॥ ಉ + ಅ = ವ ॥ ಋ + ಅ = ರ ॥ ಲೃ + ಅ = ಲ ॥**

ಉಳಿದವನ್ನು ನಾವೇ ಊಹಿಸಿ ತಿಳಿಯಬಹುದು. ಉದಾ–

**ಅಭಿ + ಅರ್ಷ = ಅಭ್ಯರ್ಷ ॥ ವಿ + ಅಸ್ಮತ್ = ವ್ಯಸ್ಮತ್ = ವ್ಯ೧ಸ್ಮತ್ ॥**

* * *

೩. ಜಾತ್ಯಸ್ವರಿತ– "ಉದಾತ್ತಾನುದಾತ್ತಸಂಗತಿಂ ವಿನಾ ಸ್ವರೂಪೇಣೈವ ಯತ್ ಸ್ವರಿತಂತತ್ ಜಾತ್ಯಸ್ವರಿತಮ್" ಪ್ರಾತಿಶಾಖ್ಯಭಾಷ್ಯಕಾರ ಉವಟ ಹೇಳಿದ ಜಾತ್ಯ ಸ್ವರಿತದ ಲಕ್ಷಣವಿದು. ಉಳಿದ ಸ್ವರಿತಗಳಿಗೆ ಉದಾತ್ತಾನುದಾತ್ತಗಳು ನಿಮಿತ್ತಗಳಾದರೆ ಜಾತ್ಯಸ್ವರಿತವು ಹಾಗಲ್ಲ. ಅದು ಸ್ವರೂಪದಿಂದಲೇ ಅಂದರೆ ಜನಿಸುವಾಗಲೇ ಸ್ವರಿತವಾಗಿದೆ ಹಾಗೂ ನಿತ್ಯಸ್ವರಿತವೂ ಆಗಿದೆ. ಪ್ರಾತಿಹತಸ್ವರಿತವು ಅನುದಾತ್ತವೇ ಆಗುವ ಸ್ವರಿತವಾಗಿದ್ದು ಹಿಂದಿನ ಉದಾತ್ತಸತ್ತ್ವವನ್ನೂ ಪರದಲ್ಲಿ ಉದಾತ್ತಸ್ವರಿತಾ ಭಾವವನ್ನೂ ಅಪೇಕ್ಷಿಸುತ್ತದೆ. ಸಂಧಿಸ್ವರಿತಗಳೂ ಉದಾತ್ತಪೂರ್ವ ಅನುದಾತ್ತಪರ ಸಂಧಿಸಲು ಯೋಗ್ಯವಾದ ಸ್ವರಾಕ್ಷರಗಳನ್ನು ಅಪೇಕ್ಷಿಸುತ್ತವೆ. ಆದರೆ ಜಾತ್ಯಸ್ವರಿತವು ಸ್ವರೂಪತಃ ಸ್ವರಿತವಾಗಿದ್ದು ನಿರಪೇಕ್ಷಸ್ವರಿತವಾಗಿದೆ. ಇದನ್ನೇ ಪ್ರಾತಿಶಾಖ್ಯಕಾರ ಶೌನಕನು ಸೂತ್ರದಲ್ಲಿ ಹೀಗೆ ತಿಳಿಸುತ್ತಾನೆ–

**"ಅತೋಽನ್ಯತ್ ಸ್ವರಿತಂ ಸ್ವಾರಂ ಜಾತ್ಯಮ್ ಆಚಕ್ಷತೇ ಪದೇ" (೩/೮)**
**ಅನ್ವಯಪದೇ ಅತಃ ಅನ್ಯತ್ ಸ್ವರಿತಂ ಸ್ವಾರಂ ಜಾತ್ಯಮ್ ಆಚಕ್ಷತೇ ।**

ಅನ್ವಯಾರ್ಥ ಪದೇ ಉದಾತ್ತಪೂರ್ವಸ್ವರಿತಾತ್ ಅನ್ಯತ್ ಸ್ವರಿತಂ ಜಾತ್ಯಸ್ವರಿತಂ ವ್ಯಾಳ್ಯಾದಿ ಆಚಾರ್ಯಾಃ ಮನ್ಯಂತೇ ।

ವ್ಯಾಳಿಯೇ ಮೊದಲಾದ ವೇದಾಚಾರ್ಯರು ಒಂದು ಪದದಲ್ಲಿ ಉದಾತ್ತ ಪೂರ್ವಸ್ವರಿತಕ್ಕಿಂತ ಬೇರೆಯಾದ ಸ್ವರಿತವನ್ನು ಅಂದರೆ ಅನುದಾತ್ತಪೂರ್ವ ಸ್ವರಿತ ವನ್ನು ಅಥವಾ ಕೇವಲ ಸ್ವರಿತವನ್ನು ಜಾತ್ಯಸ್ವರಿತವೆಂದು ತಿಳಿಯುತ್ತಾರೆ. ಉದಾ–

ಸ್ವಃ । ಕ್ವ ।

ಅನುದಾತ್ತಪೂರ್ವಸ್ವರಿತಗಳು–

ವೀರ್ಯಮ್ । ಕನ್ಯಾ । ಹೃದಯ್ಯಯಾ । ಸ್ವರ್ಣರೇ –ಇತ್ಯಾದಿ.

**ಕಂಪಸ್ವರಿತಲಕ್ಷಣ–**

**ಜಾತ್ಯೋಽಭಿನಿಹಿತಶ್ಚೈವ ಕ್ಷೈಪ್ರಃ ಪ್ರಶ್ಲಿಷ್ಟ ಏವ ಚ ।**
**ಏತೇ ಸ್ವಾರಾಃ ಪ್ರಕಂಪಂತೇ ಯತ್ರೋಚ್ಚಸ್ವರಿತೋದಯಾಃ ॥** (೩/೩೪)

ಸಂಧಿಸ್ವರಿತ ಅಥವಾ ಜಾತ್ಯಸ್ವರಿತದ ಪರದಲ್ಲಿ ಉದಾತ್ತ ಅಥವಾ ಸ್ವರಿತವಿದ್ದರೆ ಅಲ್ಲಿ ಕಂಪನಿಯಮದಂತೆ ಸ್ವರಿತವನ್ನು ಉಚ್ಚರಿಸಬೇಕು. ಪಾಣಿನೀಯಶಿಕ್ಷಾ ಹೇಳಿದ ಕಂಪಲಕ್ಷಣ–

**ಮಧ್ಯೇ ತು ಕಂಪಯೇತ್ ಕಂಪಮ್ ಉಭೌ ಪಾರ್ಶ್ವೌ ಸಮಂ ಭವೇತ್ ।**
**ಸರಂಗಂ ಕಂಪಯೇತ್ ಕಂಪಂ ರಥೀವೇತಿ ನಿದರ್ಶನಮ್ ॥** (ಪಾ.ಶಿ.)

೧. ಹ್ರಸ್ವಕಂಪಕ್ಕೆ (ಏಕಕಂಪ) ಉದಾಹರಣೆ–

**ವ್ಯ೧ಸ್ಮತ್ ಪಾಶಂ ವರುಣೋ ಮುಮೋಚತ್ ॥**

**ಅಭಿ+ಅರ್ಷ+ಅನಪಚ್ಯುತಃ । ಅಭ್ಯ೧ರ್ಷಾನಪಚ್ಯುತಃ ॥**

೨. ದೀರ್ಘಕಂಪಕ್ಕೆ (ತ್ರಿಕಂಪ) ಉದಾ–

**ಅಭಿ+ಇಮಂ=ಅಭೀ೩ಮಮ್ ॥**

– ಹೀಗೆಯೇ ಉಳಿದ ಉದಾಹರಣೆಗಳನ್ನೂ ತಿಳಿಯಬೇಕು.

* * *

## ೪. ವೈದಿಕಸಂಧಿಗಳು

ನಾಲ್ಕುವಿಧ ಸಂಧಿಗಳು–

**ಲೋಪಾऽऽಗಮಾऽऽದೇಶಪ್ರಕೃತಿಭಾವಾಃ ।**

ಆದೇಶಾದಿಗಳ ಲಕ್ಷಣ–

**ಸ್ಥಾನೇ ಶತ್ರುವದಾದೇಶಃ ಘಾಲೇ ಪುಂಡ್ರವದಾಗಮಃ ।**
**ದಂತಾನಾಮಿವ ಲೋಪಃ ಸ್ಯಾತ್ ಛತ್ರವತ್ ಪ್ರತ್ಯಯಾಃ ಪರೇ ॥** (ಪ.ಮ.ಭಾ.)

### ೧. ಲೋಪಸಂಧಿ – ವಿಸರ್ಗಲೋಪಸಂಧಿ

ಅ – ಹ್ರಸ್ವ ಅಕಾರದ ಮುಂದಿರುವ ವಿಸರ್ಗವು ಅದರ ಮುಂದೆ ಹ್ರಸ್ವ ಅಕಾರವನ್ನು ಬಿಟ್ಟು ಉಳಿದ ಸ್ವರಾಕ್ಷರಗಳಿದ್ದರೆ ಲೋಪವಾಗುತ್ತದೆ.

**ಇಂದ್ರ ಇದ್ಧರೀ ।**

ಆ – ದೀರ್ಘ ಆಕಾರದ ಮುಂದಿರುವ ವಿಸರ್ಗವು ಅದರ ಮುಂದೆ ಯಾವುದೇ ಸ್ವರ ಅಥವಾ ಮೃದುವ್ಯಂಜನವಿರುವಾಗ ಲೋಪವಾಗುತ್ತದೆ.

**ಅತೋ ದೇವಾ ಅವಂತು ನಃ ।**

* * *

### ೨. ಆಗಮಸಂಧಿ

ವರ್ಣದ ಹಿಂದೆ ಅಥವಾ ಮುಂದೆ ಹೊಸದೊಂದು ವರ್ಣವು ಬರುವುದಕ್ಕೆ ಆಗಮಸಂಧಿ ಎನ್ನುವರು. ಉದಾ –

**ದೇವಾ "ನ್ + ಸ"ಖಿಭ್ಯಃ = ದೇವಾ "ನ್+ತ್+ಸ"ಖಿಭ್ಯಃ ।**

* * *

### ೩. ಆದೇಶಸಂಧಿ

ಹೆಚ್ಚು ಇರುವಂತಹ ಸಂಧಿಯೆಂದರೆ ಅದು ಆದೇಶಸಂಧಿಯೇ ಆಗಿದೆಯೆನ್ನಬಹುದು. ಉದಾ– ಯಣ್, ಗುಣ, ವೃದ್ಧಿ ಇವೇ ಮೊದಲಾದವು ಆದೇಶಸಂಧಿಗಳೇ ಆಗಿವೆ. ವಿಸರ್ಗಸ್ಥಾನದಲ್ಲಿ ರಕಾರ, ಓಕಾರ, ಸಕಾರ, ಶಕಾರ ಹಾಗೂ ಷಕಾರಾದೇಶಗಳು ವಿಧಿಸಲ್ಪಡುತ್ತವೆ.

೧. ಯಣ್ ಎಂದರೆ "ಯರಲವ" ಪ್ರತ್ಯಾಹಾರ. ಈ ವರ್ಣಗಳು "ಇಕ್" ವರ್ಣಗಳ ಸ್ಥಾನದಲ್ಲಿ ಕ್ರಮವಾಗಿ ಆದೇಶವಾಗಿ ಬರುತ್ತವೆ ಅಸವರ್ಣಸ್ವರಾಕ್ಷರಗಳು ಮುಂದಿರುವಾಗ. ಉದಾ-

ಇ ಈ + ಅಚ್ (ಅ, ಆ, ಉ, ಊ –ಇತ್ಯಾದಿ ಸ್ವರಾಕ್ಷರ) = ಯ್+ಅಚ್ ॥

ಉ ಊ + ಅಚ್ = ವ್+ಅಚ್ ॥

ಋ ೠ + ಅಚ್= ರ್+ಅಚ್ ॥

ಌ+ಅಚ್ = ಲ್ + ಅಚ್ ॥

* * *

**೪. ಪ್ರಕೃತಿಭಾವ**

ಸಂಧಿಯೋಗ್ಯವಾದ ವರ್ಣಗಳ ನಡುವೆ ಸಂಧಿಯಾಗದೆ ಇದ್ದಂತೆಯೇ ಇರುವುದು. ಉದಾ-

**ಯತಽಇಂದ್ರ ಭಯಾಮಹೇ ತತೋ "ನೋಽಅ" ಭಯಂ ಕೃಧಿ। ಮಘವಞ್ಛಗ್ಧಿ ತವ ತನ್ನಽಊತಿಭಿರ್ವಿ ದ್ವಿಷೋ ವಿ ಮೃಧೋ ಜಹಿ ॥**

ಅವಗ್ರಹ ಚಿಹ್ನೆಯಿರುವಲ್ಲೆಲ್ಲಾ ಪ್ರಕೃತಿಭಾವ.

ಪ್ಲುತಸಂಜ್ಞೆ- "ದೂರಾದ್ಧೂತೇ ಚ"

ಪ್ರಗೃಹ್ಯಸಂಜ್ಞೆ- "ಈದೂದೇದ್ದ್ವಿವಚನಂ ಪ್ರಗೃಹ್ಯಮ್"

ಪ್ರಕೃತಿಭಾವಸಂಧಿವಿಧಾಯಕಸೂತ್ರಮ್- "ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್" (ಪಾ.ಸೂ)

* * *

**೫. ಯಾಜ್ಞವಲ್ಕ್ಯಶಿಕ್ಷೋಕ್ತಸಂಧಿವಿಚಾರಗಳು**

ಸಂಧಿಯ ಬಗ್ಗೆ ಯಾಜ್ಞವಲ್ಕ್ಯಶಿಕ್ಷಾದ ಮಾತುಗಳು ಈ ಕೆಳಗಿನಂತಿವೆ –

**ಸಂಧಿಶ್ಚತುರ್ವಿಧೋ ಭವತೀತಿ ।**
**ಲೋಪಾಗಮೌ ವರ್ಣವಿಕಾರಃ ಪ್ರಕೃತಿಭಾವಶ್ಚೇತಿ ॥**

ಸಂಧಿಯು ನಾಲ್ಕುವಿಧ- ೧. ಲೋಪ ೨. ಆಗಮ ೩. ವರ್ಣವಿಕಾರ ೪. ಪ್ರಕೃತಿಭಾವ.

೧. ತತ್ರ ಲೋಪೋ ಭವತಿ । ಅಯಕ್ಷ್ಮಾಃ ಮಾ = ಅಯಕ್ಷ್ಮಾ ಮಾ ॥ ಶತತೇಜಾಃ ವಾಯುಃ = ಶತತೇಜಾ ವಾಯುಃ ॥ ತಿಗ್ಮತೇಜಾಃ ದ್ವಿಷತಃ = ತಿಗ್ಮತೇಜಾ ದ್ವಿಷತಃ ॥ ಇತಿ ಲೋಪಃ ॥

ಲೋಪವೆಂದರೆ ವಿಸರ್ಗಲೋಪವೆಂದರ್ಥ.

ಉದಾಹರಣೆಗಳು ಹೀಗಿವೆ–

**ಅಯಕ್ಷ್ಮಾಃ ಮಾ = ಅಯಕ್ಷ್ಮಾ ಮಾ ।**
**ಶತತೇಜಾಃ ವಾಯುಃ = ಶತತೇಜಾ ವಾಯುಃ ॥**
**ತಿಗ್ಮತೇಜಾಃ ದ್ವಿಷತಃ = ತಿಗ್ಮತೇಜಾ ದ್ವಿಷತಃ ॥**

ಇದು ಲೋಪಸಂಧಿವಿಚಾರ ॥

* * *

**೨. ಆಗಮಸಂಧಿ (ವರ್ಣಾಗಮಸಂಧಿ)**

ಉದಾಹರಣೆಗಳು ಹೀಗಿವೆ–

ಪ್ರತ್ಯಙ್ + ಸೋಮಃ = ಪ್ರತ್ಯಙ್ "ಕ್" ಸೋಮಃ ॥ ಅಸ್ಮಾನ್ + ಸೀತೇ= ಅಸ್ಮಾನ್ "ತ್" ಸೀತೇ ॥

॥ ತ್ರೀನ್ + ಸಮುದ್ರಾನ್ = ತ್ರೀನ್ "ತ್" ಮುದ್ರಾನ್ ॥ ಇತ್ಯಾಗಮಃ ॥

* * *

**೩. ವರ್ಣವಿಕಾರಸಂಧಿ (ಆದೇಶಸಂಧಿ)**

ಆ +ಇದಮ್ = "ಏ"ದಮ್ ॥ ಆ + ಇಮೇ = "ಏ"ಮೇ ॥ ಆ + ಇಷ್ವಯಃ = "ಏ"ಷ್ವಯಃ ॥ ಪ್ರ + ಇಷಿತಃ = "ಪ್ರೇ"ಷಿತಃ ॥ ಇತಿ ವಿಕಾರಃ ॥

* * *

**೪. ಪ್ರಕೃತಿಭಾವಸಂಧಿ**

ಉದಾಹರಣೆಗಳು–

ಆಶುಃ + ಶಿಶಾನಃ = ಆಶುಃ ಶಿಶಾನಃ ॥

ಯುಂಜಾನಃ + ಪ್ರಥಮಮ್ ॥ ಯುಂಜಾನಃ + ಪ್ರಥಮಮ್ ॥

ಅದಿತಿಃ + ಷೋಡಶಾಕ್ಷರೇಣ = ಅದಿತಿಃ + ಷೋಡಶಾಕ್ಷರೇಣ ॥

ದೇವೋ ವಃ + ಸವಿತಾ = ದೇವೋ ವಃ + ಸವಿತಾ । ಇತಿ ಪ್ರಕೃತಿಭಾವಃ ॥ ಇತಿ ಸಂಧಯಃ

* * *

## ೬. ಸಂಧಿಜ – ಸ್ವರಗಳು

೧. ಸಂಧಿಯಲ್ಲಿ ಉದಾತ್ತಸ್ವರೋತ್ಪತ್ತಿ ಉದಾತ್ತದೊಂದಿಗೆ ಸಂಧಿಜವರ್ಣ ಉದಾತ್ತವೇ.

**ಸೂತ್ರ** – "ಉದಾತ್ತವತ್ಯೇಕೀಭಾವ ಉದಾತ್ತಂ ಸಂಧ್ಯಕ್ಷರಮ್"

(ಪ್ರಾ.ಸೂ ೩/೧೧)

**ಸೂತ್ರ** – "ಏಕಾದೇಶ ಉದಾತ್ತೇನೋದಾತ್ತಃ" (ಪಾ.ಸೂ)

ಸಾಮಾನ್ಯವಾಗಿ ಸಂಧಿಸಂದರ್ಭದಲ್ಲಿ ಉದಾತ್ತವರ್ಣದೊಂದಿಗೆ ಯಾವುದೇ ಸ್ವರವರ್ಣವಿದ್ದರೂ ಸಂಧಿಜವರ್ಣವು ಉದಾತ್ತವೇ ಆಗುತ್ತದೆ.

ಉದಾತ್ತ + ಉದಾತ್ತ = ಉದಾತ್ತ ॥ ಅ + ಅ = ಆ ॥

ಉದಾತ್ತ + ಅನುದಾತ್ತ = ಉದಾತ್ತ ॥ ಅ + ಅ = ಆ ॥

ಅನುದಾತ್ತ + ಉದಾತ್ತ = ಉದಾತ್ತ ॥ ಅ + ಅ = ಆ ॥

ಉದಾತ್ತ + ಸ್ವರಿತ = ಉದಾತ್ತ ॥ ಅ + ಅ = ಆ ॥

ಸ್ವರಿತ + ಉದಾತ್ತ = ಉದಾತ್ತ ॥ ಅ + ಅ = ಆ ॥

* * *

### ೨. ಸಂಧಿಯಲ್ಲಿ ಸ್ವರಿತೋತ್ಪತ್ತಿವಿಚಾರ –

ಉದಾತ್ತಾನುದಾತ್ತ ಸಂಯೋಗದಲ್ಲಿ ಸ್ವರಿತೋತ್ಪತ್ತಿ

ಅ – ಪ್ರಶ್ಲಿಷ್ಟಸ್ವರಿತ –

ಪ್ರಶ್ಲಿಷ್ಟಸಂಧಿಯಲ್ಲಿ ಇ + ಇ = ಈ (ಋಗ್ವೇದ)

ಉ + ಉ = ಊ (ಕೃಷ್ಣಯಜುರ್ವೇದ ತೈತ್ತಿರೀಯಸಂಹಿತೆ)

ಆದರೆ ಋಕ್ಪ್ರಾತಿಶಾಖ್ಯಕಾರ ಶೌನಕರು ಹೇಳುವಂತೆ ಮಾಂಡೂಕೇಯಾ

ಚಾರ್ಯಪರಂಪರೆಯಲ್ಲಿ ಎಲ್ಲಾ ವಿಧದ ಪ್ರಶ್ಲಿಷ್ಟಸಂಧಿಗಳಲ್ಲಿ ಉದಾತ್ತಾನುದಾತ್ತ ಯೋಗವಿರುವಾಗ ಸ್ವರಿತವಾಗುತ್ತದೆ. ನಾವು ಮಾತ್ರ ಆ ವಿಚಾರವನ್ನು ಸ್ಮರಣೆಯಲ್ಲಿ ಇಟ್ಟುಕೊಳ್ಳಬೇಕೇ ವಿನಾ ಮಾಡಬಾರದು.

* * *

ಆ – ಅಭಿನಿಹಿತಸ್ವರಿತ– ಅಭಿನಿಹಿತಸಂಧಿಯಲ್ಲಿ ಏ+ಅ=ಏऽ/ತೇ+ ಅವದನ್=ತೇऽವದನ್

ಓ+ಅ=ಓऽ/ಗೃಣಾನೋ ऽಸ್ಮಾಕಮ್ (ಗೃಣಾನೋऽಸ್ಮಾಕಮ್)

* * *

ಇ – ಕ್ಷೈಪ್ರಸ್ವರಿತ – ಯಣ್ ಸಂಧಿಗೆ ಪ್ರಾತಿಶಾಖ್ಯದಲ್ಲಿ ಕ್ಷಿಪ್ರಸಂಧಿಯೆನ್ನುವರು. ಈ ಸಂಧಿಯಲ್ಲಿ ಉದಾತ್ತಾನುದಾತ್ತಯೋಗವಿರುವಾಗ ಕ್ಷೈಪ್ರಸ್ವರಿತವಾಗುತ್ತದೆ. ಉದಾ–

ಇ+ಅ=ಯ= ವಿ+ಅಸ್ಮತ್= ವ್ಯಗಿಸ್ಮತ್ (ವ್ಯಗಿಸ್ಮತ್)

* * *

## ೨. ಸಂಧಿಯಲ್ಲಿ ಅನುದಾತ್ತ ಉತ್ಪತ್ತಿ

ಅನುದಾತ್ತ+ಅನುದಾತ್ತ=ಅನುದಾತ್ತ.

ಅನುದಾತ್ತದೊಂದಿಗೆ ಅನುದಾತ್ತವು ಕೂಡಿದಾಗ ಅನುದಾತ್ತವೇ ಉಂಟಾಗುತ್ತದೆ.

ಅ+ಅ=ಆ ।

* * *

## ೩. ಸ್ವರಿತಾನುದಾತ್ತಯೋಗೇ ಸ್ವರಿತೋತ್ಪತ್ತಿ

ಸ್ವರಿತ + ಅನುದಾತ್ತ = ಸ್ವರಿತ.

ಪ್ರಾತಿಶಾಖ್ಯವು ಹೇಳುವಂತೆ ಸ್ವರಿತವು ಅನುದಾತ್ತದೊಂದಿಗೆ ಸಂಧಿಸುವಾಗ ಸ್ವರಿತೋತ್ಪತ್ತಿ.

ಉ+ಉ=ಊ । ಮಧು+ಉದಕಮ್=ಮಧೂದಕಮ್

* * *

## ೭ ವೈದಿಕಶಬ್ದಸ್ವರಪ್ರಕರಣಮ್

ಪಾಣಿನೀಯ ಶಿಕ್ಷಾನುಸಾರ ವೈದಿಕಶಬ್ದಗಳು-

**ಅಂತೋದಾತ್ತಮ್ ಆದ್ಯುದಾತ್ತಮ್**
**ಉದಾತ್ತಮ್ ಅನುದಾತ್ತಂ ನೀಚಸ್ವರಿತಮ್ ।**
**ಮಧ್ಯೋದಾತ್ತಂ ಸ್ವರಿತಂ ದ್ವ್ಯುದಾತ್ತಂ**
**ತ್ರ್ಯುದಾತ್ತಮ್ ಇತಿ ನವಪದಶಯ್ಯಾ ॥ ೪೫ ॥**

ಶ್ಲೋಕಾರ್ಥವಿವರಣೆ -

ಪಾಣಿನೀಯಶಿಕ್ಷಾ ಹೇಳುವ ಪ್ರಕಾರ ವೈದಿಕ ಶಬ್ದಗಳು ಒಂಬತ್ತು ಪ್ರಕಾರ. ಅವೆಂದರೆ-

೧. **ಉದಾತ್ತಶಬ್ದಗಳು**- ಒಟ್ಟು ಆರು ಉದಾತ್ತಶಬ್ದಗಳಿವೆ, ಅವೆಂದರೆ-

ಅ ಉದಾತ್ತಶಬ್ದ- **ಓಂ, ಭೂಃ, ಯಃ, ಕಃ, ಸಃ** -ಇತ್ಯಾದಿ.

ಆ ಆದ್ಯುದಾತ್ತಶಬ್ದ- **ಭುವಃ, ಇಂದ್ರಃ, ವರುಣಃ, ಸೋಮಃ** -ಇತ್ಯಾದಿ.

ಇ ಅಂತ್ಯೋದಾತ್ತಶಬ್ದ- **ರುದ್ರಃ, ಅಗ್ನಿಃ, ಮಿತ್ರಃ** -ಇತ್ಯಾದಿ.

ಈ ಮಧ್ಯೋದಾತ್ತಶಬ್ದ- **ಅಗ್ನಿನಾ, ಹವಿಷಾಮ್, ರುದ್ರೇಣ, ಭವಾಯ.**

ಉ ದ್ವ್ಯುದಾತ್ತಶಬ್ದ- **ಬೃಹಸ್ಪತಿಃ, ವನಸ್ಪತಿಃ** -ಇತ್ಯಾದಿ.

ಊ ತ್ರ್ಯುದಾತ್ತಶಬ್ದ- **ಇಂದ್ರಾಬೃಹಸತೀ.**

* * *

೨. **ಸ್ವರಿತಶಬ್ದಗಳು ಎರಡು**-

ಅ ಸ್ವರಿತಶಬ್ದ- **ಸ್ವಃ, ನ್ಯಕ್, ಕ್ವ** -ಇತ್ಯಾದಿ.

ಆ ನೀಚಸ್ವರಿತಶಬ್ದ- **ವೀರ್ಯಮ್ । ಓಕ್ಯೇ । ಊರ್ಮ್ಯಾಯ** -ಇತ್ಯಾದಿ.

* * *

### ೮. ಋಕ್ ಪ್ರಾತಿಶಾಖ್ಯಾನುಸಾರ

ಪ್ರಾತಿಶಾಖ್ಯತಿಳಿಸುವಂತೆ ಸ್ವರಿತಶಬ್ದಗಳು ನಾಲ್ಕು - ಸ್ವರಿತಃ, ಆದಿಸ್ವರಿತ, ಮಧ್ಯಸ್ವರಿತ, ಅಂತಸ್ವರಿತ. ಕ್ರಮವಾಗಿ-

**"ಸ್ವಃ, ಸ್ವರ್ಣರೇ, ಹೃದಯ್ಯಯಾ, ವೀರ್ಯಮ್"** ಉದಾಹರಣೆಗಳಾಗಿವೆ.

**೩. ಅನುದಾತ್ತಶಬ್ದ ಒಂದು–**

**ಚ, ವಾ, ಹ, ನಃ , ವಃ** –ಇತ್ಯಾದಿ .

* * *

## ೯. ಸ್ವರಸಾಧಾರಣಪ್ರಕ್ರಿಯೆ

ಈ ಹಿಂದೆ ಹೇಳಿದಂತೆ ವೇದಮಂತ್ರಗಳಲ್ಲಿ ಹನ್ನೊಂದು ವಿಧದ ಶಬ್ದಗಳಿವೆ. ಸಾಮಾನ್ಯವಾಗಿ ಈ ವಿಚಾರ ವೇದಾಧ್ಯೇತೃಗಳಿಗೆ ಗೊತ್ತಿರಲೇಬೇಕು. ಶಬ್ದಸ್ವರದ ಬಗ್ಗೆ ತಿಳಿಯಲಿಚ್ಛಿಸುವವರು "ಅನುದಾತ್ತಂ ಪದಮೇಕವರ್ಜಮ್" ಎಂಬ ಸೂತ್ರ ವನ್ನು ತಿಳಿದಿರಲೇಬೇಕು. ಸೂತ್ರಾರ್ಥವು ಹೀಗಿದೆ "ಯಾವುದೇ ಒಂದು ವೈದಿಕಶಬ್ದ ದಲ್ಲಿ ಉದಾತ್ತ ಅಥವಾ ಸ್ವರಿತವರ್ಣವನ್ನು ಬಿಟ್ಟು ಉಳಿದೆಲ್ಲಾ ಅಕ್ಷರಗಳೂ ಅನುದಾತ್ತವೇ ಆಗಿರುತ್ತವೆ". ಉಳಿದಂತೆ ಒಂದಕ್ಷರದ ಶಬ್ದವು ಒಂದೋ ಉದಾತ್ತ ಒಂದೋ ಅನುದಾತ್ತ ಅಥವಾ ಜಾತ್ಯಸ್ವರಿತವಾಗಿರುತ್ತದೆ.

ಉದಾಹರಣೆಗಳು–

**ಓಂ, ಭೂಃ, ಕಃ, ಯಃ, ವೈ** (ಉದಾತ್ತಶಬ್ದಗಳು)

**ನಃ, ವಃ, ಮಾ, ನೌ, ಚ, ವಾ, ಹ** (ಅನುದಾತ್ತಶಬ್ದಗಳು)

**ಸ್ವಃ, ಕ್ವ, ನ್ಯಕ್** (ಸ್ವರಿತಶಬ್ದಗಳು)

* * *

ಎರಡು ಅಕ್ಷರಗಳ ಶಬ್ದಗಳಲ್ಲಿ ಸ್ವರನಿಯಮ –

ಉಳಿದಂತೆ ಎರಡು ಮೂರು ನಾಲ್ಕು ಅಕ್ಷರದ ಶಬ್ದಗಳಲ್ಲಿ ಸ್ವರನಿಯಮವು ಉದಾತ್ತ ಅಥವಾ ಸ್ವರಿತ ಅಕ್ಷರವೊಂದನ್ನು ಬಿಟ್ಟುಳಿದೆಲ್ಲಾ ಅಕ್ಷರಗಳೂ ಅನುದಾತ್ತವೆಂದೇ ತಿಳಿಯಬೇಕು. ಉದಾಹರಣೆಗೆ ಎರಡಕ್ಷರದ ಶಬ್ದಗಳಲ್ಲಿ ಮೊದಲ ಅಕ್ಷರವು ಉದಾತ್ತವಾದರೆ ಎರಡನೆಯ ಅಕ್ಷರವು ಅನುದಾತ್ತವೆಂದು ತಿಳಿಯಬೇಕು. ಅದು ಉದಾತ್ತಪರದಲ್ಲಿರುವ ಪ್ರಯುಕ್ತ ಅದಕ್ಕೆ ಸ್ವರಿತಸ್ವರವು ಬರುತ್ತದೆಯೆಂದು ತಿಳಿಯಬೇಕು. ಉದಾಹರಣೆಗೆ ಸೋಮ ಶಬ್ದವು ಆದ್ಯುದಾತ್ತ ಶಬ್ದವಾಗಿರುವುದ ರಿಂದ ಎರಡನೆಯ ಅಕ್ಷರವು ಅನುದಾತ್ತವೆಂದು ತಿಳಿಯಬೇಕು. ಬಳಿಕ ಉದಾತ್ತದ ಮುಂದಿರುವ ಅನುದಾತ್ತವು "ಉದಾತ್ತಾತ್ ಅನುದಾತ್ತಸ್ಯಸ್ವರಿತಃ" ಎಂಬ ಸೂತ್ರದಿಂದ ಸ್ವರಿತವಾಗುತ್ತದೆಯೆಂದೂ ತಿಳಿಯಬೇಕು. ಹೀಗೆಯೇ ಉಳಿದ ಆದ್ಯುದಾತ್ತ ಶಬ್ದಗಳನ್ನೂ ತಿಳಿಯಬೇಕು ಉದಾ–

